

# ಸಿದ್ಧಗಂಗಾ



ಸಂಪುಟ : ೪೦ ಫೆಬ್ರುವರಿ ೨೦೦೪ ಸಂಚಿಕೆ : ೨

ವೈಭವಪೂರ್ಣ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರಾಮಹೋತ್ಸವ



ಮುಖಪುಟ
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರಾಮಹೋತ್ಸವ - ವಿವಿಧ ದೃಶ್ಯಾವಳಿಗಳು



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೦ ಫೆಬ್ರುವರಿ ೨೦೦೪ ಸಂಚಿಕೆ : ೨

## ಒಳಪುಟಗಳಲ್ಲಿ..........



ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭



ವಿಳಾಸ :
''ಸಂಪಾದಕರು'', 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೬೦೦/– |
| ಬಿಡಿ ಪ್ರತಿ | ರೂ. ೧೦.೦೦ |



## ವಚನಗಳ ಅನುಷ್ಠಾನ....

"ನಾವೆಲ್ಲ ಬಸವಣ್ಣನವರ ವಚನಗಳನ್ನು ಹೇಳುತ್ತೇವೆ. ವಚನಗಳನ್ನು ಮಧುರವಾಗಿ ಹಾಡುತ್ತೇವೆ. ವಚನಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುತ್ತೇವೆ. ವಚನ ಕೃಷಿಮಾಡಿದವರಿಗೆ ಪ್ರಶಸ್ತಿ ಪುರಸ್ಕಾರಗಳನ್ನು ನೀಡುತ್ತೇವೆ. ಆದರೆ ಇಲ್ಲಿ ಸಿದ್ಧಗಂಗಾ ಮಠದಲ್ಲಿ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳವರು ವಚನಗಳನ್ನು ಆಚರಿಸಿ ತೋರಿಸಿದ್ದಾರೆ. ಏನು ಸಾಮಾನ್ಯವೇ? ಎಂಟು ಸಾವಿರ ಮಕ್ಕಳಿಗೆ ನಿತ್ಯ ಪ್ರಸಾದವ್ಯವಸ್ಥೆ ಮಾಡುವುದೆಂದರೆ ಅದ್ಭುತವಲ್ಲವೆ? ಕರ್ನಾಟಕದ ಅಷ್ಟೇ ಏಕೆ ಭರತಖಂಡದ ಯಾವಲ್ಲಿಯೂ, ಯಾವ ಮಠದಲ್ಲಿಯೂ ಇಂತಹ ಅದ್ಭುತ ನಡೆದಿಲ್ಲ. ಇದು ಪ್ರಶಂಸೆಗಾಗಿ ಹೇಳುತ್ತಿರುವ ಮಾತಲ್ಲ, ಕಣ್ಣುಕಂಡ ವಿನೂತನ ಲಿಂಗಪೂಜೆ. ಕಲ್ಯಾಣ, ಬಸವಣ್ಣ ಕಟ್ಟಿದ ಕಲ್ಯಾಣ ಇಲ್ಲಿ ಪುನರೋದಯವಾಗುತ್ತಿದೆ" – ಎಂದವರು ಬೀದರ್ ಜಿಲ್ಲೆಯ ಭಾಲ್ಕಿ ಹಿರೇಮಠ ಸಂಸ್ಥಾನದ ಪೂಜ್ಯರಾದ ಶ್ರೀ ಬಸವಲಿಂಗಪಟ್ಟದ್ದೇವರು. ಸಂದರ್ಭ - ದಿನಾಂಕ ೧೫.೧.೨೦೦೪ರಂದು ಶ್ರೀಮಠದಲ್ಲಿ ನಡೆದ ಲಿಂಗೈಕ್ಯ ಗುರುಗಳಾದ ಶಿವಯೋಗಿ ಶ್ರೀ ಅಟವೀ ಸ್ವಾಮಿಗಳ ಮತ್ತು ಲಿಂಗೈಕ್ಯ ಶಿವಯೋಗಿ ಶ್ರೀ ಉದ್ದಾನಸ್ವಾಮಿಗಳವರ ಪುಣ್ಯ ಸ್ಮರಣೋತ್ಸವ ಸಮಾರಂಭದ ಉದ್ಘಾಟನಾಪರವಾದ ಆಶೀರ್ವಚನ ನೀಡಿದಾಗ.

"ಅವರು ದೊಡ್ಡವರು. ಅಜ್ಜಾವರಿಗೆ ತೊಂಬತ್ತಾರುವರ್ಷ. ಕಿವಿ ಕೇಳಿಸುತ್ತವೆ. ಕಣ್ಣು ಚೆನ್ನಾಗಿವೆ, ನೆನಪು ಗಟ್ಟಿಯಾಗೈತೆ, ನಡಿಗೆ ದೃಢವಾಗೈತೆ, ಕೈಯಾಗಲಿ, ತಲೆಯಾಗಲೀ ನಡುಗುತ್ತಿಲ್ಲ, ಕಣ್ಣು ಪುಣ್ಯ ಮಾಡಿರಬೇಕು ಅಜ್ಜಾವರನ್ನು ಕಾಣಲಿಕ್ಕೆ" – ಎಂದು ಸಂಗಮದಲ್ಲಿ ಹಿರಿಯರೊಬ್ಬರು ನೆರೆದ ಜನಸಮೂಹಕ್ಕೆ ಶ್ರೀಗಳವರನ್ನು ಪರಿಚಯಿಸುತ್ತಿದ್ದ ರೀತಿ.

*ಗ್ರಾಮಾಂತರ ಬಸವ ಜಯಂತಿ*

ದಿನಾಂಕ ೨೫.೧.೨೦೦೪ರಂದು ಗುಲ್ಬರ್ಗಾ ಜಿಲ್ಲೆ ಸುರಪುರ ತಾಲ್ಲೂಕು ಹತ್ತಿಗುಡೂರ-ಹೊನಾಲದ ಬಳಿ ಕೃಷ್ಣಾ-ಭೀಮಾನದಿಗಳು ಸೇರುವ ಸಂಗಮ ಪುಣ್ಯಸ್ಥಳದಲ್ಲಿ ಗ್ರಾಮಾಂತರ ಬಸವಜಯಂತಿ. ಅದರ ಅಂಗವಾಗಿ ಜಗಜ್ಯೋತಿ ಬಸವೇಶ್ವರ ನಾಟಕದ ೬೬೭ನೆಯ ಪ್ರದರ್ಶನ. ಸಹಸ್ರಾರು ಪ್ರೇಕ್ಷಕರು. ಮಹಿಳೆಯರ ಸಂಖ್ಯೆಯೇ ಅಪಾರ. ನಾಟಕ ನಡೆಯುತ್ತಿತ್ತು. ನಡುವೆ ಮಳೆ ಬಂದಿತು. ಪ್ರದರ್ಶನ ನಿಲ್ಲಿಸಿದೆವು. ಪ್ರೇಕ್ಷಕರ ಮಧ್ಯೆ ಮಾತು ತೂರಿಬಂದವು "ಇಪ್ನ... ಈಗ್ಲೇ ಬರಬೇಕಾಗಿತ್ತೇ? ಕಣ್ಣಿನ ಪುಣ್ಯ ಕಳೆಯಾಕೆ?" ಎಂದವರು ಒಬ್ರು. "ಅಲ್ಲ, ಇದೆಲ್ಲಿತ್ತೋ ಇದರ... ಎಂಥಾ ಕೆಲ್ಸ ಆಯ್ತು ಆ ನಮ್ಮಪನ್ನ, ಬಸವಣ್ಣನ್ನ ಕಣ್ತುಂಬಾ ನೋಡೋಣ ಅಂಶಾ ನಾಲ್ವಾರದಿಂದ ಬಂದಿದ್ದೆ. ನಿಂತೋಯ್ತಲ್ಲಾ". "ಸ್ವಾಮಿ ಪಕ್ಕದ ಆಂಧ್ರದ ಮೆಹಬೂಬ್ ನಗರ ಜಿಲ್ಲೆಯಿಂದ, ಭೀಮಾನದೀ ಆಚೆದಂಡೆಯಿಂದ ಹೆಂಗ್ರನ್ನ ಕರಕೊಂಡು, ಹೊಳೆಯಾಗಿ ನೀರ್ನಲ್ಲಿ ನಡ್ಕಂಡ್ ಬಂದಿದ್ದೆ. ಇದೇನ್ ಸಾಹೇಬ್ರ ಹಿಂಗಾಯ್ತು, ನಾಟಕ ನಿಲ್ಸೇ ಬಿಡ್ತೀರಾ. ಮುಂದುವರ್ಸಲ್ವಾ", "ನಾವು ಅಜ್ಜಾವರ್ನೇ (ಶ್ರೀಗಳವರನ್ನು) ಕೇಳ್ಕೋತೀವಿ ಆಡ್ಸಿ ಅಪ್ಪಾ ಅಂತಾ". ಒಂದಲ್ಲ ಹತ್ತಾರು ಬಾಯಿಗಳು ಎದೆಯಾಳದ ಆಸೆಯನ್ನು ಬಿಚ್ಚಿ ಆಡಿದವು. ನಾಟಕ ಮುಂದುವರಿಸಲಾಯಿತು. ಶ್ರೀಗಳವರು ಬೆಳ್ಳಂಬೆಳಗಿನ ತನಕ ಕೂತೇಬಿಟ್ಟರು. ನಾಟಕ ಮುಗಿದಾಗ ಭೀಮಾ-ಕೃಷ್ಣೆಯರ ಮೇಲೆ ನವ ಅರುಣೋದಯವಾಗುತ್ತಲಿತ್ತು. ಕಲಾವಿದರು ದಾರಿಮಧ್ಯದ ಹೊಳೆಯಲ್ಲಿ ಸ್ನಾನ, ಪೂಜೆ, ಉಪಹಾರ ಮುಗಿಸುತ್ತಿರುವಲ್ಲಿ ದಾರಿಯಲ್ಲಿ ಬಂದ ಕೂಲಿ ಕುಂಬಳದ ಹೆಣ್ಣು ಮಕ್ಕಳು ತಾವು ಹೊತ್ತು ತಂದಿದ್ದ ಜೋಳ, ಸಜ್ಜೆರೊಟ್ಟಿ, ಚಟ್ನಿಪುಡಿ, ಪಲ್ಯವನ್ನು ಬೆಳಗಿನ ಬಿಸಿಲಲ್ಲಿ ಸ್ನಾನಮಾಡಿ ಕುಳಿತಿದ್ದ ಕಲಾವಿದರಿಗೆ ಸಂತೋಷವಾಗಿ ನಾ ಮುಂದು ತಾ ಮುಂದು ಎನ್ನುವಂತೆ ನೀಡುತ್ತಿದ್ದ ದೃಶ್ಯ 'ಕಲ್ಯಾಣದಲ್ಲಿ ನೀಡುವವರೇ ಎಲ್ಲ, ಬೇಡುವವರಿಲ್ಲ' ಎಂಬ ಬಸವಣ್ಣನವರ ಮಾತು ನೆನಪಾಯಿತು.

*ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರೆ*

ಶ್ರೀಮಠದಲ್ಲಿ ೧೨.೨.೨೦೦೪ರಿಂದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರಾಮಹೋತ್ಸವ. ಒಂದು ನೂರು ವರ್ಷಗಳಿಂದ ನಡೆದು ಬಂದಿರುವ ಜಾತ್ರೆ. ದಾಸೋಹವೈಭವವನ್ನು ಇಲ್ಲಿ ಕಾಣುವ ಸುವರ್ಣಾವಕಾಶ. ದೇವರ ಉತ್ಸವಗಳು, ವಸ್ತುಪ್ರದರ್ಶನ, ಜನಜಾನುವಾರುಗಳ ಸಮಾವೇಶ, ಪ್ರವಚನ, ಶಿವಾನುಭವಗಳ ಸಂಯೋಜನೆ. ಭಾವೈಕ್ಯತೆಯ ಮಹಾಸಂಗಮ. ಉತ್ತಮರಾಸುಗಳಿಗೆ ಬಹುಮಾನ. ಹರಗುರು ಚರಮೂರ್ತಿಗಳ ಪಂಚಬ್ರಹ್ಮೋತ್ಸವ, ರಥೋತ್ಸವ, ಬೆಳ್ಳಿಪಾಲಕಿ ಮಹೋತ್ಸವ, ದೇವಲೋಕ ಧರೆಗಿಳಿಯಿತೇ ಎಂಬ ಭಾವಲೋಕ, ಮದ್ದು ಬಾಣ ಬಿರುಸುಗಳ ಸಂಭ್ರಮ, 'ಎತ್ತೆತ್ತ ನೋಡಿದತ್ತತ್ತ' ಶ್ರೀಗಳವರ ಮಿಂಚಿನ ಸಂಚಾರ, ಎಲ್ಲೂ ಯಾವುದಕ್ಕೂ ಕೊರತೆ ಬರಬಾರದೆಂಬ ಕಟ್ಟೆಚ್ಚರ, ಜಾತ್ರಾರ್ಥಿಗಳೆಲ್ಲ ಉಂಡು ತಣಿದರೆಂಬುದನ್ನು ಕೇಳಿದಾಗ ನಿರಾಳ ನೆಮ್ಮದಿ. ಜನರೂಪಿಯಾಗಿ ಸಾಕ್ಷಾತ್ಕಾರಗೊಂಡ ಪರಶಿವ ತೃಪ್ತ್ಯರ್ಥ ದಾಸೋಹ ಕೈಂಕರ್ಯ. ಇದೊಂದು ಅಚ್ಚರಿ.

– ಸಂಪಾದಕ







## ನೈತಿಕ ಕ್ರಾಂತಿ

ಪ್ರಪಂಚ ಇಂದು ಅಪಾಯದ ಅಂಚಿನಲ್ಲಿದೆ. ಮಾರಕಾಸ್ತ್ರಗಳ ಉತ್ಪಾದನೆಯಲ್ಲಿ ಪೈಪೋಟಿ ನಡೆದಿದೆ. ಅಧಿಕಾರದಾಹ ದಳ್ಳುರಿಯಂತೆ ವ್ಯಾಪಿಸುತ್ತಿದೆ. ಭೋಗ ಲಾಲಸೆಗೆ ಮಿತಿಯಿಲ್ಲವಾಗಿದೆ. ಯುಗದ ಮನೋಧರ್ಮವೇ ಕಲುಷಿತಗೊಳ್ಳುತ್ತಿದೆ. ಜಗತ್ತು ಹಲವು ಮಾಲಿನ್ಯಗಳ ವಿಷಸಮುದ್ರವಾಗಿದೆ. ವಿಕಾಸಮುಖಿಯಾಗಬೇಕಾದ ಮನುಷ್ಯ ವಿಕಾರ ವಿಕೃತಿಗಳ ನಡುವೆ ನಲುಗುತ್ತಿರುವುದು ವಿಷಾದನೀಯವಾಗಿದೆ. ಅಣ್ವಸ್ತ್ರಗಳ ಉತ್ಪಾದನೆಗಾಗಿ ಸಾವಿರ ಸಾವಿರ ಕೋಟಿ ರೂಗಳನ್ನು ವ್ಯಯ ಮಾಡುಲಾಗುತ್ತಿದೆ. ಆತ್ಮರಕ್ಷಣೆಯ ಹೆಸರು ಬೇರೆ ಅದಕ್ಕೆ. ಕಟ್ಟುವ ಮನೋಧರ್ಮ ಇಲ್ಲ, ಕೆಡಿಸುವ ಕೊಳಕು ಮನಸ್ಸುಗಳು ಹೇರಳವಾಗಿ ಬೆಳೆಯುತ್ತಿವೆ.

ವಿಶ್ವದಾದ್ಯಂತ ಅನೇಕ ಕ್ರಾಂತಿಗಳು ಆಗಿಹೋದವು. ಒಂದಲ್ಲ ಹಲವು ಹನ್ನೊಂದು ಕ್ರಾಂತಿಗಳು. ಆರ್ಥಿಕ ಕ್ರಾಂತಿ, ರಾಜಕೀಯ ಕ್ರಾಂತಿ, ಧಾರ್ಮಿಕ ಕ್ರಾಂತಿ, ಸಾಮಾಜಿಕ ಕ್ರಾಂತಿ, ಸಾಹಿತ್ಯಿಕ ಕ್ರಾಂತಿ, ಶೈಕ್ಷಣಿಕ ಕ್ರಾಂತಿ, ಕ್ಷೀರಕ್ರಾಂತಿ, ಹಸಿರುಕ್ರಾಂತಿ, ಪರಿಸರ ಕ್ರಾಂತಿ, ಸ್ತ್ರೀ ವಿಮೋಚನ ಕ್ರಾಂತಿ, ವರ್ಣಕ್ರಾಂತಿ, ವರ್ಗ ಸಂಘರ್ಷಕ್ರಾಂತಿ, ಅಸ್ಪೃಶ್ಯತಾ ನಿವಾರಣಾಕ್ರಾಂತಿ, ಅಕ್ಷರಕ್ರಾಂತಿ ಮುಂತಾಗಿ ಕ್ರಾಂತಿಗಳು ನಡೆದವೇ ಹೊರತು ನಡೆಯಬೇಕಾದ ಒಂದು ಮುಖ್ಯಕ್ರಾಂತಿ ಇನ್ನೂ ನಡೆದೇ ಇಲ್ಲ. ಯಾವುದು ಆ ಕ್ರಾಂತಿ ಎಂದರೆ ನೈತಿಕ ಕ್ರಾಂತಿ.

ಜಗತ್ತು ಇಂದು ಉಳಿಯಬೇಕಾದರೆ ಮುಖ್ಯವಾಗಿ ನೈತಿಕ ಕ್ರಾಂತಿ ಆಗಬೇಕು. ನೈತಿಕತೆ ಎಂಬುದು ಜಗತ್ತಿನ ಹೃದಯವಿದ್ದಂತೆ. ಅದು ಮಾನವೀಯತೆಯನ್ನು ಘೋಷಿಸುವ, ರಕ್ಷಿಸುವ ಮಹಾಶಕ್ತಿ. ವಿಚಾರಕ್ರಾಂತಿ ಎಷ್ಟೇ ದೊಡ್ಡದಾದರೂ ನೈತಿಕತೆಯಿಲ್ಲದೇ ಹೋದರೆ ಫಲ, ಪರಿಣಾಮ ಕೇವಲ ಶೂನ್ಯ. ಇಂದು ಎಲ್ಲ ಕ್ಷೇತ್ರಗಳು, ಎಲ್ಲ ಸ್ಥಾನಗಳು, ನೈತಿಕತೆಯ ಅಭಾವದಿಂದ ಅಶಾಂತಿಗೊಳಗಾಗಿವೆ. ಧಾರ್ಮಿಕ ಕ್ಷೇತ್ರವೂ ಸೇರಿದಂತೆ ರಾಜಕೀಯ ಕ್ಷೇತ್ರವನ್ನೊಳಗೊಂಡು ಎಲ್ಲ ಅನೈತಿಕತೆಯ ಅಂಗಳಗಳಾಗಿವೆ. ಯಾವ ವೃತ್ತಿಯೂ ಪಾವಿತ್ರ್ಯತೆಯನ್ನು ಉಳಿಸಿಕೊಳ್ಳಬೇಕೆಂದು ಕನಿಷ್ಠ ಪ್ರಯತ್ನವನ್ನಾದರೂ ಮಾಡುತ್ತಿಲ್ಲ. ಉಪ್ಪು ತನ್ನ ಉಪ್ಪಿನ ಗುಣವನ್ನು ಕಳೆದುಕೊಂಡರೆ ಮಾಡುವುದಾದರೂ ಏನನ್ನು? ನೈತಿಕತೆ ಎಂಬುದು ಬಾಹ್ಯಕ್ರಾಂತಿಯಲ್ಲ. ಆಂತಂಕವಾದುದು. ಪ್ರತಿಕ್ಷಣದಲ್ಲೂ ಎಚ್ಚರವಾಗಿರತಕ್ಕದ್ದು. ಕತ್ತಿಯ ಅಲಗಿನ ಮೇಲೆ ನಡೆಯುವಂಥದ್ದು. ಅದು ಪ್ರಚಾರ, ಪ್ರದರ್ಶನಗಳಿಂದ ಮುಕ್ತವಾದದ್ದು. ಸದಾ ತನ್ನ ಮನಸ್ಸಿನೊಂದಿಗೆ, ಚಿಂತನೆಗಳೊಂದಿಗೆ, ಮಾತು-ಕೃತಿಗಳೊಂದಿಗೆ ವ್ಯವಹರಿಸುವಂಥದ್ದು. ನೈತಿಕ ಕ್ರಾಂತಿಯ ಆದಾಯವನ್ನು ಸುಸಂಸ್ಕೃತ ಜನಾಂಗ ನಿರ್ಮಾಣದ ಅಳತೆಗೋಲಿನಿಂದ ಪ್ರಾಮಾಣಿಕತೆಯ ತಕ್ಕಡಿಯಿಂದ ನಿರ್ಧರಿಸುವಂಥದ್ದು. ವೇದಿಕೆಯ ಸೋಗಿನ ಮಾತುಗಳಾಗಲೀ, ವೇಷಭೂಷಣಗಳಾಗಲೀ, ಕೇವಲ ಯಾಂತ್ರಿಕ ಆಚರಣೆಗಳಾಗಲೀ, ನೈತಿಕ ಕ್ರಾಂತಿಯ ಮುಖಿಗಳಾಗಲಾರವು. ಸ್ವಾಮಿಯಾದವನು ಸ್ವಾಮಿ ಯೋಗ್ಯಗುಣಗಳಿಂದ, ಸಚಿವನಾದವರು ನಿಸ್ವಾರ್ಥ ಸೇವೆಯಿಂದ, ಅಧಿಕಾರಿಯಾದವನು ಕರ್ತವ್ಯನಿಷ್ಠೆಯಿಂದ, ವೈದ್ಯನಾದವನು ರೋಗಿಯಲ್ಲಿ ದೇವರನ್ನು ಕಾಣುವ ದೃಷ್ಟಿಯಿಂದ, ನ್ಯಾಯವಾದಿಯಾದವನು ನ್ಯಾಯನಿಷ್ಠುರಿ ದಾಕ್ಷಿಣ್ಯಪರನಾಗದಿರುವುದರಿಂದ, ಶಿಕ್ಷಕನಾದವನು ವಿದ್ಯಾರ್ಥಿಯನ್ನು ಉತ್ತಮತೆಯತ್ತ ಬೆಳೆಸುವುದರಿಂದ, ಕೃಷಿಕನಾದವನು ತನ್ನ ಭೂಮಿಯೇ ತನ್ನ ಭಗವಂತನೆಂದು ಭಕ್ತಿಯಿಂದ ಉಳುಮೆ ಮಾಡುವುದರಿಂದ, ವ್ಯಾಪಾರಿಯಾದವನು ತನ್ನ ತಕ್ಕಡಿಯಲ್ಲಿ ಪಾಪ-ಪುಣ್ಯಗಳನ್ನು ತೂಗಿ ನೋಡುವುದರಿಂದ, ಕಾರ್ಮಿಕನಾದವನು ತನ್ನ ಕಾರ್ಖಾನೆಯೇ ತನ್ನ ದೇವಾಲಯವೆಂದು ತಿಳಿಯುವುದರಿಂದ, ಗೃಹಿಣಿಯಾದವಳು ಗೃಹಕೃತ್ಯದಲ್ಲಿ ಪವಿತ್ರಭಾವನೆಯನ್ನು ತಾಳುವುದರಿಂದ – ಪ್ರತಿಯೊಬ್ಬರೂ ಆತ್ಮವಂಚನೆಯಿಲ್ಲದೆ ಕರ್ತವ್ಯ ಮುಖಿಗಳಾಗುವುದರಿಂದ ನೈತಿಕ ಕ್ರಾಂತಿಯನ್ನು ಮಾಡಬೇಕಾಗಿದೆ.

ದುರ್ದೈವವೆಂದರೆ ಇಂದು ಯಾರೂ ಇತ್ತ ಗಂಭೀರವಾಗಿ ಚಿಂತಿಸುವ ಚಿತ್ತವೃತ್ತಿಯವರಾಗುತ್ತಿಲ್ಲ. "ಹೆಗ್ಗಣವನ್ನಿಕ್ಕಿ ಮನೆಕಟ್ಟುವ" ಕೆಲಸದಲ್ಲಿ ನಿರತರಾಗಿರುವುದು ಕಾಣಬರುತ್ತಿದೆ. ಎಲ್ಲಿಯವರೆಗೆ 'ಅನೈತಿಕತೆಯೆಂಬ ಹೆಗ್ಗಣ'ಗಳನ್ನು ದೂರವಿಟ್ಟು ಕ್ರಾಂತಿ ಮಾಡಲಾರೆವೋ ಅಲ್ಲಿಯತನಕ ಮನುಕುಲದ ಉದ್ಧಾರವಾಗಲಾರದು. ಇದಕ್ಕಿರುವುದು ಒಂದೇ ಮಾರ್ಗ ಬಸವಣ್ಣನವರು ಆಚರಿಸಿ ತೋರಿಸಿದ ನೈತಿಕಮಾರ್ಗ – ಅದೆಂದರೆ "ಇಲ್ಲಿ ಸಲ್ಲು"ವಂತೆ ಬಾಳುವ ಏಕೈಕಮಾರ್ಗ. 'ಅಂತರಂಗ-ಬಹಿರಂಗ' ಶುದ್ಧಿಯಮಾರ್ಗ. ಪ್ರಪಂಚವನ್ನು ಅಲ್ಲಗಳೆಯದಂತೆ ಉತ್ತಮವನ್ನಾಗಿಸಿ ಬದುಕುವ ಕಾಯಕಶೀಲ- ದಾಸೋಹ ಸಂಪನ್ನ ಭಕ್ತಿಮಾರ್ಗ.

*

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಅಂಬರಮಂಡಲದಲ್ಲಿ ಚಿದಾದಿತ್ಯನುದಯವಾಗಲು*
*ಅಂಬುಜ ಕಮಲ ಉದಯವಾಗಿ*
*ಅಮರಗಣಂಗಳು ಸಂಭ್ರಮಿಸುತ್ತಿದ್ದಾರೆ ನೋಡಾ*
*ಅಮರಗಣದ ತಿಂಥಿಣಿಯೊಳಗೆ*
*ಅನುಪಮ ಮಹಿಮನ ಕಂಡು*
*ಅಪ್ಪಿ ಅಗಲದೆ ಅಪ್ರತಿಮನಾಗಿರ್ದೆನು ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !*

ಶರಣನ ಬ್ರಹ್ಮರಂಧ್ರವೆಂಬ ಚಿದಾಕಂಸ ಮಧ್ಯದ ಒಳವಲಯ. ಅಲ್ಲಿ ಚಿನ್ಸೂರ್ಯನುದಯ. ಅದರಿಂದ ಸಹಸ್ರಗಳ ಕಮಲದ ವಿಕಾಸ. ಅಲ್ಲಿ ಲಿಂಗಧ್ಯಾನ ನಿರತರಾದ ಶರಣ ಪವಿತ್ರರು. ಅವರೆಲ್ಲ ಲಿಂಗೋಪಚಾರದಲ್ಲಿ ಸಂಭ್ರಮಿತರು. ಆ ಪವಿತ್ರ ನಿತ್ಯತ್ವರ ನಡುವೆ ನಿಃಕಳಬ್ರಹ್ಮ. ಅವನು ಜ್ಞಾನನೇತ್ರದಿಂದ ಅವರನ್ನೆಲ್ಲ ನಿರೀಕ್ಷಿಸಿ ಅವರನ್ನಗಲದೆ ಉಪಮಾತೀತನಾಗಿ ಕಾಣುತ್ತಿದ್ದಾನೆ – ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭು ಎಂಬುದಾಗಿದೆ ವಚನ ಅರ್ಥಭಾವ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

### ಶ್ರೀವಾಣಿ

ವ್ಯಕ್ತಿ ಮತ್ತು ಸಮಾಜ ಒಂದಕ್ಕೊಂದು ಪೂರಕ, ಪ್ರೇರಕ. ವ್ಯಕ್ತಿಯ ಬೆಳವಣಿಗೆಗೆ ಸಮಾಜದಲ್ಲಿ ವಾತಾವರಣ ಶುದ್ಧವಾಗಿರಬೇಕು. ಸಮಾಜ ಸಾಮೂಹಿಕ ಅಭಿವೃದ್ಧಿ ಹೊಂದಬೇಕಾದರೆ ವ್ಯಕ್ತಿಯ ಜೀವನ ಹಸನಾಗಬೇಕು. ಈ ಎರಡರ ಸಾಮರಸ್ಯ, ಮಧುರ ಬಾಂಧವ್ಯದಿಂದ ದೇಶ ಪ್ರಗತಿ ಹೊಂದುತ್ತದೆ. ವ್ಯಕ್ತಿ, ಸಮಾಜ, ದೇಶ ಮೂರೂ ಪರಸ್ಪರ ಸಂಬಂಧವುಳ್ಳ ಒಂದು ಘಟಕ.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಕುಂಬಾರ ಗುಂಡಯ್ಯನ ಕುಕಿಲಿರುದು ನೆನೆಯುವ
ಕುಂಭನಿಗೆ ಇಂಬಾಗಿ ನಗುತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಲ್ಲಮನ ನೆನೆವಲ್ಲಿ ಇನ್ನಿಲ್ಲದ ಸಂತಸವ
ಸೊಲ್ಲು ಸೊಲ್ಲಿನಲ್ಲಿ ತೋರಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಥಣಿಯಪ್ಪಗಳ ಅತಿಶಯದಿ ಸ್ತುತಿಸುವ
ಸ್ತುತಿ ನಿಂದೆಗಳನು ಸವಿದುಂಬಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಜಗುಣರ ಹಾಡುವ ಸಪ್ಪಣ್ಣರ ಸ್ಮರಿಸುವ
ಮುಪ್ಪಿನಾರ್ಯರ ಮನಗಂಡ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೈವಲ್ಯದ ಹಾಡುಗಳ ಕೊರಳೆತ್ತಿ ಹಾಡುವ
ಕೈಲಾಸಮಂಗಳವ ಕರೆತರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾದ ಸುನಾದವನಾದರದಿ ನಿರ್ಮಿಪ
ನಾದ ಶಿವಲೋಕವ ಅನುರಣಿಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕುರುಹಿಡಿದು ಕರಿಗೊಂಡು ಸಿರಿಲಿಂಗವಾಗಿರುವ
ಧರೆಯ ಸಿರಿಶಿವಗಂಧ ಹಿರಿಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏನು ಕಾರಣ ನೀನು ಮರ್ತ್ಯಕ್ಕೆ ಬಂದಿರುವೆ
ಏನು ನಡೆಸಿರುವೆ ಇಹದೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರನ ರೂಪದಿ ಬಂದು ನರನಾಟಕವಾಡಿರುವ
ಸ್ಮರಹರನ ಪ್ರತಿರೂಪವಾಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಿನ್ನಪವನವ ಧರಿಸು ಚೆನ್ನ ಶ್ರೀಗುರುಲಿಂಗ
ಮುನ್ನಡೆಸು ಕೈಹಿಡಿದು ಶಿವಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







॥ ಓಂ ಶ್ರೀ ಗುರುಲಿಂಗಾಯ ನಮಃ ॥







ತ್ರಾಹಿ ಮೃತ್ಯುಂಜಯ ನಿರಾಮಯ ನಿರಾಧಾರ ತ್ರಾಹಿ ನಿರುಪಮ ನಿರಾಲಂಬ ಚಿದ್ರಸಪೂರ
ತ್ರಾಹಿ ಆನತಜನನಿಕರ ಸುಖಕರಣ ಕೃಪಾಭರಣ ಭವ ತಿಮಿರಾರುಣ
ತ್ರಾಹಿ ಷಡ್ವಿಧಲಿಂಗಸಂಗ ಸದ್ಗುಣತುಂಗ ತ್ರಾಹಿ ನಿತ್ಯಕರುಣಾಪಾಂಗ
ತ್ರಾಹಿ ಗುರುಸಿದ್ಧಯತಿರಾಯ ಜಿತಮಾಯ ಚಿತ್ಕಾಯರಾಜಾರ್ಧಶೇಖರ ಪುರಹರಾ॥

## ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾಮಹೋತ್ಸವ ಆಹ್ವಾನ ಪತ್ರಿಕೆ

ಶ್ರೀ ಶ್ರೀ ಶಿವಕುಮಾರಸ್ವಾಮಿಗಳು, ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರು

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1925ನೇ ಶ್ರೀ ಚಿತ್ರಭಾನು ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ | ಷಷ್ಠಿ | ಗುರುವಾರ | ೧೨-೨-೨೦೦೪ | ಬೆಳಿಗ್ಗೆ ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿಯ ಉತ್ಸವ ಮತ್ತು ಶ್ರೀ ಸಿದ್ಧಗಂಗಾ ಮಾತೆಯ ಕಳಸ ಮಹೋತ್ಸವ ವೃಷಭ ವಾಹನ ಮತ್ತು ಗಜವಾಹನ |
| ಮಾಘ ಬಹುಳ | ಸಪ್ತಮಿ+ಅಷ್ಟಮಿ | ಶುಕ್ರವಾರ | ೧೩-೨-೨೦೦೪ | ನಂದಿವಾಹನ ಮತ್ತು ರಾವಣವಾಹನ |
| ಮಾಘ ಬಹುಳ | ನವಮಿ | ಶನಿವಾರ | ೧೪-೨-೨೦೦೪ | ಹುಲಿವಾಹನ ಮತ್ತು ಸಿಂಹವಾಹನ |
| ಮಾಘ ಬಹುಳ | ದಶಮಿ | ಭಾನುವಾರ | ೧೫-೨-೨೦೦೪ | ಅಶ್ವವಾಹನ ಮತ್ತು ಶೇಷವಾಹನ |
| ಮಾಘ ಬಹುಳ | ಏಕಾದಶಿ | ಸೋಮವಾರ | ೧೬-೨-೨೦೦೪ | ಹುತ್ತದವಾಹನ ಮತ್ತು ನವರಂಗಪಾಲಕಿ ಉತ್ಸವ |
| ಮಾಘ ಬಹುಳ | ದ್ವಾದಶಿ | ಮಂಗಳವಾರ | ೧೭-೨-೨೦೦೪ | ಬಿಲ್ವವೃಕ್ಷವಾಹನ ಮತ್ತು ನವಿಲುವಾಹನ |
| ಮಾಘ ಬಹುಳ | ತ್ರಯೋದಶಿ | ಬುಧವಾರ | ೧೮-೨-೨೦೦೪ | ಮಹಾಶಿವರಾತ್ರಿ ಪೂಜಾದಿಗಳು ಮತ್ತು ಮುತ್ತಿನ ಪಾಲಕ್ಕಿ ಉತ್ಸವ |
| ಮಾಘ ಬಹುಳ | ಚತುರ್ದಶಿ | ಗುರುವಾರ | ೧೯-೨-೨೦೦೪ | **ರಥೋತ್ಸವ** ಮತ್ತು ರುದ್ರಾಕ್ಷಿ ಮಂಟಪ ಉತ್ಸವ |
| ಮಾಘ ಬಹುಳ | ಅಮಾವಾಸ್ಯೆ | ಶುಕ್ರವಾರ | ೨೦-೨-೨೦೦೪ | **ಬೆಳ್ಳಿಪಾಲಕಿ ಉತ್ಸವ** |
| ಪಾಲ್ಗುಣ ಶುದ್ಧ | ಪಾಡ್ಯ | ಶನಿವಾರ | ೨೧-೨-೨೦೦೪ | ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ |

ಮಾಮೂಲಿನಂತೆ ದಿನಾಂಕ 13.2.2003 "**ಎತ್ತಿನ ಪರಿಷೆ**"ಯು ಮತ್ತು "**ದನಗಳ ಪ್ರದರ್ಶನ**" ಹಾಗೂ **ಉತ್ತಮ ರಾಸುಗಳಿಗೆ ಬಹುಮಾನ ವಿತರಣೆ**ಯೂ ನಡೆಯುವಂತೆ ಏರ್ಪಡಿಸಿದೆ. ಪ್ರತಿದಿನ ಸಂಜೆ ಸಾಮೂಹಿಕ ಪ್ರಾರ್ಥನೆಯೊಂದಿಗೆ ವಿದ್ವಾಂಸರಿಂದ ಧಾರ್ಮಿಕ ಉಪನ್ಯಾಸಗಳು, ವಿವಿಧ ಉತ್ಸವಗಳು, "**ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ**"ದಲ್ಲಿ "**ಸಾಂಸ್ಕೃತಿಕ ಚಟುವಟಿಕೆಗಳು**" ನಡೆಯುತ್ತವೆ. ಸರ್ವರೂ ಸಕಾಲದಲ್ಲಿ ಎಲ್ಲಾ ಉತ್ಸವಗಳು ಹಾಗೂ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

**ಶ್ರೀ ಸಿದ್ಧಗಂಗಾ ಮಠ**
ತುಮಕೂರು ಜಿಲ್ಲೆ.

**ಶ್ರೀ ಶಿವಕುಮಾರ ಸ್ವಾಮಿಗಳು**
ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರು



# ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ದಯವಿಲ್ಲದ ಧರ್ಮವದೇವುದಯ್ಯ?*
*ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ !*
*ದಯವೇ ಧರ್ಮದ ಮೂಲವಯ್ಯ !*
*ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ !*

ಸಮಾನಧರ್ಮದ ವ್ಯಷ್ಟಿಸಮೂಹವೇ ಸಮಾಜ, ಒಬ್ಬರ ಕಷ್ಟ-ಸುಖಗಳಿಗಾಗಿ ಮತ್ತೊಬ್ಬರು ಮಿಡುಕಿ ತೋರಿದ ಅನುಕಂಪವೇ ವ್ಯಷ್ಟಿಯನ್ನು ಸಮಾಜವನ್ನಾಗಿ ಬಂಧಿಸಿ ಪರಸ್ಪರ ಸಂಬಂಧಿಸಿರುವ ಸುವರ್ಣಸೂತ್ರಪ್ರಾಯವಾದ ಸಹಾನುಭೂತಿ. ಆ ಸಹಾನುಭೂತಿಯಿಂದ ಉದ್ಭವಿಸಿದ ಅನುಕೂಲ ಪ್ರತಿಕ್ರಿಯೆಯ ಸ್ಪಷ್ಟರೂಪವೇ ದಯೆ. ಈ ದಯೆಯ ಮೂಲಾಂಶವಿಲ್ಲದೆ ಯಾವ ಧರ್ಮವೂ ತನ್ನ ಮೂಲೋದ್ದೇಶವಾದ ಸಮಷ್ಟಿ ಹಿತವನ್ನು ಕಿಂಚಿತ್ತೂ ಸಾಧಿಸದೆ, ಅಸೂಯೆ-ಅಹಿತಸ್ಪರ್ಧೆ-ವೈರ-ವಿಧ್ವಂಸನಗಳಿಗೆ ಪುಟಕೊಟ್ಟು ಸರ್ವನಾಶವನ್ನುಂಟುಮಾಡುವುದು. ಆದುದರಿಂದಲೇ ವಿಶ್ವಬಾಂಧವ್ಯದ ಮೇಲೆ ಕಟ್ಟಿದ ಯಾವ ಧರ್ಮದಲ್ಲೇ ಆಗಲಿ, ಆಯಾ ಧರ್ಮಪ್ರವರ್ತಕರಾದ ಪುರಾತನಾಚಾರ್ಯರು ದಯೆಗೆ ಪ್ರಥಮ ಸ್ಥಾನವನ್ನು ಕೊಟ್ಟು ಅದರತ್ತಲೇ ಎಲ್ಲರ ಅವಧಾರಣೆಯಿರಲೆಂದು ಒತ್ತಿ ಒತ್ತಿ ಮತ್ತೆ ಮತ್ತೆ ಹೇಳಿರುವರು.

*ಕೊಲುವನೇ ಮಾದಿಗ!*
*ಹೊಲಸ ತಿಂಬುವನೇ ಹೊಲೆಯ!*
*ಕುಲವೇನೋ (ಆವಂದಿರ) ಕುಲವೇನೋ?*
*ಸಕಲ-ಜೀವಾತ್ಮರಿಗೆ ಲೇಸನೇ ಬಯಸುವ*
*ನಮ್ಮ ಕೂಡಲಸಂಗನ ಶರಣರೇ ಕುಲಜರು!*

ಮಾದಿಗ ಮಾದಿಗ ಎಂದು ಊರ ಹೊರಗಿನವರನ್ನು ಕಂಡು ಮೂಗು ಮುರಿಯುವರು. ಹೊಲೆಯರೇನು ಊರ ಒಳಗಿಲ್ಲವೆ? ಪರಹಿಂಸೆಯಲ್ಲಿ ತೊಡಗಿ, ಜೀವಜಾಲವನ್ನು ಯಜ್ಞ-ಯಾಗದ ನೆಪದಲ್ಲಿ ಕೊಂದು ತಿಂದವರು ಹೊಲೆಯರಲ್ಲವೆ? ಈ ಒಳಗು-ಹೊರಗಿನ ಹುಸಿ ವೈಯಾರವೇಕೆ? ಯಾವನು ಹುಟ್ಟಿದ ಕುಲ ಏನಾದರಾಗಿರಲಿ, ಯಾವನು ಸಕಲ ಜೀವಾತ್ಮರಿಗೆ ಒಳ್ಳೆಯದನ್ನು ಹಾರೈಸುವನೋ ಅವನೇ ಕುಲಜ ಅಲ್ಲದವನು ಹೀನ!

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ!*
*ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ!*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ!*
*ಇದೇ ಅಂತರಂಗಶುದ್ಧಿ ! ಇದೇ ಬಹಿರಂಗ ಶುದ್ಧಿ !*
*ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ !!*

ಅಂತರಂಗ ಬಹಿರಂಗ ಈ ಎರಡೂ ಶುದ್ಧವಾಗಿರಬೇಕೆಂಬುದೇ ವೇದ ಆಗಮ ಶಾಸ್ತ್ರ ಪುರಾಣ ಮುಂತಾದ ಎಲ್ಲ ಧರ್ಮವಾಣಿಯ ಮರ್ಮಧ್ವನಿ! ಆದರೆ ಇದನ್ನು ನಿತ್ಯ ವ್ಯವಹಾರಕ್ಕೆ ಇಳಿಸುವ ವಿವರವಿವೇಚನಾಶಕ್ತಿಯಿಲ್ಲದ ಜನ ಅನೂಚಾನವಾಗಿ ಬಂದ ಕೇವಲ ಆಡಂಬರದ ಅರ್ಚನೆ-ಪೂಜೆಗಳಲ್ಲಿ ತೊಡಗಿ ಕಾಯಕ್ಲೇಶಕ್ಕೂ, ಜಪತಪಗಳಲ್ಲಿ ತೊಡಗಿ ಮನಃಕ್ಲೇಶಕ್ಕೂ ಈಡಾಗಿ, ಇದೇ ಅಂತರಂಗ-ಬಹಿರಂಗ-ಶುದ್ಧಿಯೆಂದು ವ್ಯರ್ಥಶ್ರಮಪಡುವುದನ್ನು ಕಂಡು, ಬಸವಣ್ಣನವರು ಮಾನವನ ಗಮನವನ್ನು ಆದ್ಯಂತವಾಗಿ ಅವನ ನಿತ್ಯ ಜೀವನದ ವ್ಯವಹಾರಗಳತ್ತ ಸೆಳೆದು, ಅಲ್ಲಿ ಆಯ ತಪ್ಪದಿರಲೆಂದು ಕರೆ ನೀಡಿದರು. ಕಳ್ಳತನ ಮಾಡಬೇಡ, ಕೊಲ್ಲಬೇಡವೆನ್ನುತ್ತ ಕಾಯಶುದ್ಧಿಯನ್ನೂ; ಸುಳ್ಳನ್ನು ಹೇಳಬೇಡ, ಪರದೂಷಣೆಯಲ್ಲಿ ನಿರತನಾಗಬೇಡ, ಆತ್ಮಪ್ರಶಂಸೆಯಲ್ಲಿ ತೊಡಗಬೇಡವೆನ್ನುತ್ತ ವಾಕ್ ಶುದ್ಧಿಯನ್ನೂ; ಕೋಪಿಸಬೇಡ, ಅನ್ಯರಿಗೆ ಅಸಹಿಷ್ಣುತೆಯನ್ನು ಸೂಚಿಸಬೇಡವೆನ್ನುತ್ತ ಮನಶ್ಶುದ್ಧಿಯನ್ನೂ ನಿರ್ದೇಶಿಸಿ, ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ; ಅಂತರ್-ಬಹಿರುಭಯಾಂಗ ಶುದ್ಧಿಯೆಂದು ಸಾರಿ ಸಾರಿ ಹೇಳಿರುವರು.

*ಹೊಯ್ದರೆ ಹೊಯ್ಗಳು ಕೈಯ ಮೇಲೆ!*
*ಬೈದ್ದರೆ ಬೈಯ್ಗಳು ಕೈಯ ಮೇಲೆ!*
*ಹಿಂದಣ ಜನನವೇನಾದರಾಗಲಿ*
*ಇಂದಿನ ಭೋಗವು ಕೈಯ ಮೇಲೆ!*
*ಕೂಡಲಸಂಗಮದೇವಯ್ಯ*
*ನಿಮ್ಮ ಪೂಜಿಸಿದ ಫಲ ಕೈಯ ಮೇಲೆ!*

ನಮ್ಮ ಈ ಜನ್ಮದ ಈ ಹೊತ್ತಿನ ಆಗುಹೋಗುಗಳಿಗೆಲ್ಲ ಹಿಂದಣ ಜನ್ಮದ ಕಟ್ಟುಕದಲ್ಲಿ ಕಾರಣವನ್ನು ಹುಡುಕುವುದು ಬೇಡ. ಅದರಿಂದ ವಿಧಿವಾದವು ತಲೆದೋರಿ, ಪೌರುಷವು ಹಿಮ್ಮೆಟ್ಟುವುದು. ದೃಢವಾದ ಕಾರ್ಯಶೀಲವು ಶಿಥಿಲಗೊಂಡು, ಯೋಜನೆ ಮತ್ತು ಸಾಧನೆಗಳು ಸ್ಥಗಿತಗೊಳ್ಳುವವು – ಎಂದು, ಜೀವನವು ಅವ್ಯವಸ್ಥಿತವಾಗುವುದನ್ನು ಸಹಿಸದೆ, ಬಸವಣ್ಣನವರು ಪುರಾಕೃತ ಕರ್ಮಗಳ ಜನ್ಮ ಜನ್ಮಾಂತರ ಪ್ರಾಪ್ತತೆಯನ್ನು ಅಲ್ಲಗಳೆದರು. ನಮ್ಮ ಇಂದಿನ ಜೀವನದ ಸೋಲು-ನಲವುಗಳ ಮೇಲೆ ಹಿಂದಣ ಜನ್ಮಗಳ ಕರಾಳಛಾಯೆ ಬೀಳದೆಂದೂ, ಬದ್ಧೀತೆಂದು ಕಂಗೆಡಬಾರದೆಂದೂ, ಧೈರ್ಯತುಂಬಿ, ಪ್ರಸ್ತುತ ಕಾರ್ಯಚಟುವಟಿಕೆಗಳತ್ತ ನಮ್ಮನ್ನು ಹುರಿ ದುಂಬಿಸಿರುವರು.

ನಾವು ಒಬ್ಬರಿಗೆ ಹೊಡೆದರೆ, ಹೊಡೆತಗಳು ಈ ಜನ್ಮದಲ್ಲೇ ಈಗಲೇ ಹಿಂತಿರುಗಿ ಬೀಳುವವು, ಬೈದರೆ ಈ ಜನ್ಮದಲ್ಲೇ ಈಗಲೇ ಹಿಂತಿರುಗಿ ಬರುವವು. ಅದಕ್ಕೇಕೆ ಇನ್ನೊಂದು ಜನ್ಮ? ಆದುದರಿಂದ ಕೈಯೆತ್ತಿ ದೇವರನ್ನು ಪೂಜಿಸು, ಶಿವನು ನಿನಗೆ ಭೋಗ-ಭಾಗ್ಯಗಳನ್ನು, ಕೈಯೆತ್ತಿ ಆ ಕೈಯ ಮೇಲೇ, ಈ ಜನ್ಮದಲ್ಲೇ, ಈಗಲೇ ಕೊಡುವನು – ಎಂದಿರುವರು.

*(ಕೃಪೆ : ಬಸವ ವಚನಾಮೃತ)*







# ಇಷ್ಟಲಿಂಗದ ಅವಶ್ಯಕತೆ

– ಪಂಡಿತ ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು,
ಸಿದ್ಧಗಂಗಾ ಮಾಸ ಪತ್ರಿಕೆ
ಬೆಂಗಳೂರು.

ಶಿವನನ್ನು ಲಿಂಗರೂಪದಿಂದ ಉಪಾಶಿಸುವ ಕ್ರಮ ಪ್ರಾಚೀನ. ದೇವಾಲಯಗಳಲ್ಲಿ ವಿಶ್ವಪ್ರತೀಕವಾದ ಲಿಂಗವನ್ನು ಪ್ರತಿಷ್ಠಾಪಿಸಿ ಮತ್ತು ಅದೇ ಲಿಂಗವನ್ನೇ ದೇಹದ ಮೇಲೆ ಚಿಕ್ಕದನ್ನಾಗಿ ಮಾಡಿ ಧರಿಸಿಕೊಂಡು ಉಪಾಸನೆಮಾಡುವ ಕ್ರಮವೂ ಪ್ರಾಚೀನ. ಇದಕ್ಕೆ ಅನೇಕ ಪ್ರಮಾಣಗಳು ಸಿಗುತ್ತವೆ. ಈ ರೀತಿಯಲ್ಲಿ ಲಿಂಗಪ್ರತಿಷ್ಠೆ. ಲಿಂಗಧಾರಣೆ ಇತ್ಯಾದಿಗಳು ವೈಯಕ್ತಿಕವಾಗಿತ್ತು. ವಂಶಾನುಗತವಾಗಿ ವೀರಶೈವರಂತೆ ಅದು ಸಮಾಜ ರೂಪವನ್ನು ಪಡೆದದ್ದು ಕಾಣುವುದಿಲ್ಲ. ಆದರೆ ಲಿಂಗಿಬ್ರಾಹ್ಮಣ, ವೀರಶೈವ ಬ್ರಾಹ್ಮಣರೆಂದು ಕರೆಯಲ್ಪಡುವ ಅನೇಕರಲ್ಲಿ ಲಿಂಗಧಾರಣ ಕ್ರಮ ವಂಶಾನುಗತವಾಗಿ ಬಂದಿದೆ. ಆದರೆ ಅವರು ವರ್ಣಾಶ್ರಮ ಧರ್ಮಬದ್ಧರಾಗಿ ಯಜ್ಞೋಪವೀತವನ್ನು, ಮತಸಂಸ್ಕಾರವಾದ ದೀಕ್ಷೆಯನ್ನೂ ಮಾಡಿಕೊಂಡು ಲಿಂಗವನ್ನು ಧರಿಸಿಕೊಳ್ಳುವವರು – ಅವರು ತಮಿಳುನಾಡಿನ ಶೈವಪುರಾತನರನ್ನೂ ಬಸವಾದಿ ಪ್ರಮಥರನ್ನು ಪೂಜ್ಯರೆಂದು ಭಾವಿಸುವರು. ಇವರನ್ನು ಆರಾಧ್ಯಬ್ರಾಹ್ಮಣರೆಂದೂ, ವೀರಶೈವರೆಂದೂ ಕರೆಯಲಾಗುತ್ತಿದೆ. ತೆಲುಗು, ತಮಿಳುನಾಡಿನಲ್ಲಿ ಇಂಥವರು ಈಗಲೂ ಕಾಣಸಿಗುತ್ತಾರೆ. ಇವರೂ ವಂಶಾನುಗತವಾಗಿ ಲಿಂಗಧಾರಣಕ್ರಮವನ್ನನುಸರಿಸಿಕೊಂಡು ಬಂದಿದ್ದರೂ ಬಸವಣ್ಣನ ಅತಿವರ್ಣಾಶ್ರಮಧರ್ಮದ ಮತವನ್ನು ಅಂಗೀಕರಿಸದೆ ದೇಹದ ಮೇಲೆ ಲಿಂಗ ಧರಿಸಿರುವುದು ಕಂಡುಬರುವುದು. ಅಂತೆಯೇ ಲಿಂಗಧರಿಸಿದವರೆಲ್ಲ ವೀರಶೈವರೆಂಬ ಭಾವನೆ ತಲೆದೋರಿ ಅನೇಕ ಗೊಂದಲಗಳಿಗೂ ಕಾರಣವಾಗಿದೆ. ಎಷ್ಟು ಜನ ವೀರಶೈವರು ವೀರಶೈವ ಲಿಂಗಿಬ್ರಾಹ್ಮಣರೆಂದು ಈಗಲೂ ಹೇಳಿಕೊಂಡು ಶೂದ್ರತ್ವ ತಪ್ಪಿಸಿಕೊಳ್ಳಲು ಹೆಣಗುತ್ತಿರಬಹುದು. ಅದೇನೆ ಇರಲಿ ಲಿಂಗಧಾರಣಕ್ರಮ ಶೈವರಲ್ಲಿ ಹುಟ್ಟಿತು. ವರ್ಣಾಶ್ರಮ ಬದ್ಧವಾದ ಶೈವಭೇದದವರಲ್ಲಿ ಬೆಳೆಯಿತು. 'ಲಿಂಗಾಯತ'ರಲ್ಲಿ ಪರಿಪೂರ್ಣ ಸ್ಥಿತಿಗೆ ಮುಟ್ಟಿತು. ಶೈವಪ್ರಭೇದಗಳಲ್ಲಿ ಲಿಂಗಧಾರಣ ಕ್ರಮಕ್ಕೂ ಲಿಂಗಾಯತ ಧರ್ಮದಲ್ಲಿನ ಲಿಂಗಧಾರಣ ಕ್ರಮಕ್ಕೂ ಉದ್ದೇಶದಲ್ಲಿ ಮಹದಂತರವುಂಟು. ವರ್ಣಾಶ್ರಮಬದ್ಧ ಶೈವದಲ್ಲಿ 'ವರ್ಣಾನಾಂಬ್ರಾಹ್ಮಣೋಗುರುಃ' ಎಂಬುದನ್ನು ಸಾರಿ, ಗುರುಶಿಷ್ಯರಲ್ಲಿ ತಾರತಮ್ಯವನ್ನುಂಟುಮಾಡಿತು. ಈ ಕ್ರಮ ಲಿಂಗಾಂಗ ಸಾಮರಸ್ಯ ಸಾಧಕವಲ್ಲ. ಇದು ಕೇವಲ ವಿಚಾರದಲ್ಲಿಯೇ ಮುಗಿದು ಆಚರಣೆಗೆ ದೂರವಾಯಿತು.



ಅತಿವರ್ಣಾಶ್ರಮಿಗಳಾದ 'ಲಿಂಗಾಯತ' ಧರ್ಮದಲ್ಲಿಯಾದರೋ ಲಿಂಗವೆಂದರೆ ಭಕ್ತ; ಲಿಂಗವೆಂದರೆ ಗುರು-ಲಿಂಗ-ಜಂಗಮವೆಂಬ ತ್ರಿವಿಧರೂಪವಾದ ಲಿಂಗ. ಇವುಗಳ ಸಾಮರಸ್ಯದಿಂದ ಕೂಡಿತು. ಇಲ್ಲಿ ಭಕ್ತ, ಗುರು, ಜಂಗಮ ಮೂವರೂ ಲಿಂಗಭಕ್ತರು. ಆತ್ಮಚೈತನ್ಯ ತತ್ತ್ವವನ್ನೇ ಇಷ್ಟಲಿಂಗವಾಗಿ ಹೊರಗೆ ಪಡೆದು ಒಳಗೆ ಯೋಚಿಸಿ ಒಳಹೊರಗನ್ನು ಒಂದು ಮಾಡುವ ಕ್ರಿಯಾಜ್ಞಾನ ಸಾಮರಸ್ಯ ರಹಸ್ಯವೇ 'ಇಷ್ಟಲಿಂಗ'ವಾಗಿ ಲಿಂಗಾಯತದಲ್ಲಿ ಪ್ರಧಾನವಾಗಿ, ಸಮಸ್ತ ಶೈವ ಲಿಂಗಧಾರಿಗಳಿಗಿಂತ ಭಿನ್ನವಾಯಿತು. ಈ ಪದ್ಧತಿ ಬಸವಣ್ಣನಿಂದ ಲೋಕದಲ್ಲಿ ಪ್ರಸಾರವಾದ್ದರಿಂದ ಬಸವಣ್ಣ ಪೂರ್ವಾಚಾರ್ಯನೆನಿಸಿದನು. ಆವನು ಗುರುರೂಪ, ಲಿಂಗರೂಪ, ಜಂಗಮರೂಪನೆಂದೂ ಲಿಂಗವಂತ ಧರ್ಮದಲ್ಲಿ ಕಾಣಿಸಿಕೊಂಡ. ಇವರ ಈ ನೂತನ ವಿಚಾರವಾದದ 'ಇಷ್ಟಲಿಂಗಕಲ್ಪನೆ'ಯ ಕಾರಣವಾಗಿ ಶಿವಲೋಕ ಭಕ್ತನ ಮನೆಯಂಗಳಕ್ಕೆ ನಡೆದುಬಂತು. ಜ್ಯೋತಿರ್ಲಿಂಗಗಳು

ಒಡಿಬಂದು ಇಷ್ಟಲಿಂಗದಲ್ಲಿ ಬೆರೆತುಹೋದವು. ಅಷ್ಟೇ ಏಕೆ ಮುಕ್ತಿಮುಕ್ತಿಯೆಂಬ ಒಣಭ್ರಾಂತಿಯಿಂದ ಜನಮುಕ್ತವಾಗಿ ಎಲ್ಲಿಯೋ ಸಿಗುವ ಮುಕ್ತಿಭಕ್ತನ ಸರ್ವಕ್ರಿಯೆಗಳಲ್ಲಿ ಮುಕ್ತಗೊಂಡಿತು. ವ್ಯಕ್ತಿಯ ವ್ಯಕ್ತಿತ್ವದ ಘನತೆ ಅರಳಿ ಅಖಂಡ ಧೈರ್ಯ ಒಡಮೂಡಿತು. ವ್ಯಕ್ತಿಯ ವ್ಯಕ್ತಿತ್ವವನ್ನರಳಬೇಕು. ಅಖಂಡ ಧೈರ್ಯಬೇಕು.

ಕ್ರಿಯಾಸ್ವಾತಂತ್ರ್ಯ; ವ್ಯಕ್ತಿಸ್ವಾತಂತ್ರ್ಯ ಬೇಕು. ಬ್ರಹ್ಮಾಂಡ ಭರಿತನಾದ ಶಿವನನ್ನು ತನ್ನಲ್ಲಿ ಕಂಡು ಸುಖಿಸಬೇಕು. ತಿಳಿಯದ ಕೆಲವು ಮಂತ್ರಗಳಿಂದ ಶಿವಲೋಕಕ್ಕೆ ಕಳಿಸುತ್ತೇವೆಂದು ಸಾರುತ್ತ ಶೋಷಣೆ ಮಾಡುವ ದಳ್ಳಾಳಿಗಳಿಂದ ಬಂಧಮುಕ್ತನಾಗಬೇಕು. ಹೊರಗೆಲ್ಲಿಯೂ ಸಿಗದಿದ್ದನ್ನು ತನ್ನಲ್ಲಿಯೇ ನೋಡಿಕೊಳ್ಳಬೇಕು ಎಂದು ಯಾರಿಗೆ ಇಚ್ಛೆಯಿದೆಯೋ ತುಂಬುಜೀವನ, ಪರಿಪೂರ್ಣ ಜೀವನ ಬೇಕೆಂದು ಯಾರು ಬಡಬಡಿಸುವರೋ. ಅವರಿಗೆಲ್ಲ ಇಷ್ಟಲಿಂಗದ ಅವಶ್ಯಕತೆ ಇದ್ದೇ ಇದೆ. ಜೀವನದ ಸಾರಸರ್ವಸ್ವ ಇದಕ್ಕಿಂತ ಬೇರೆ ಇನ್ನೇನಿದೆ? ಹಾಗಿಲ್ಲದೆ ನಾವು ಕೆಲವು ದಿನ ಹೇಗೋ ಬದುಕುತ್ತೇವೆನ್ನುವವರ ವಿಚಾರವಾಗಿ ಈಗ ಏನೂ ಹೇಳಲಾಗುವುದಿಲ್ಲ.



ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳುಂಟೆಂದು ಎಲ್ಲರೂ ಒಪ್ಪುತ್ತಾರೆ. ಈ ಮೂರು ದೇಹಗಳ ಸಹಕಾರವೂ ಪರಿಪೂರ್ಣಜ್ಞಾನಕ್ಕೆ ಸಹಕಾರಿ. ಇವುಗಳಲ್ಲಿ ಒಂದರ ಅಸಹಕಾರವಾದರೂ ಜೀವನಪರಿಪೂರ್ಣವೆನಿಸದು. ಆತ್ಮ ಚೈತನ್ಯತತ್ತ್ವವನ್ನು ಹೊರಗೆ ತಂದು ಆಕಾರ ಗೊಳಿಸಿ ಹಿಡಿದು ಅದನ್ನು ಮೂರಂಗಗಳಿಗೆ ಅಂದರೆ ದೇಹಕ್ಕೆ, ಪ್ರಾಣಕ್ಕೆ, ಭಾವಕ್ಕೆ ಸಂಬಂಧಗೊಳಿಸಿ, ದೇಹದ ಮನದ, ಭಾವದ ಪ್ರಾಕೃತತ್ವವನ್ನು ಅಪ್ರಾಕೃತಗೊಳಿಸಿ ಒಳಗುಹೊರಗೆ, ಹೊರಗು ಒಳಗೆ ಸ್ಫಟಿಕ ಘಟದೊಳಗಣ ಜ್ಯೋತಿಯಂತೆ ಆಗಬೇಕು. ಲೋಕಸುಖಿಸಬೇಕು ಎಂಬ ಇಚ್ಛೆಯುಳ್ಳ ಬಸವಣ್ಣನವರ ಹಂಬಲ ಅರ್ಥವಾದವರು ಇಷ್ಟಲಿಂಗವನ್ನು ಧರಿಸಬೇಕು. ಸಮಾಜದಲ್ಲಿ ಕಡ್ಡಾಯಗೊಳಿಸಬೇಕು. ಬೇರೇ ರೀತಿಯಲ್ಲಿ ಯೋಚನೆ ಮಾಡುವವರ ಯೋಚನೆ ಇಲ್ಲಿ ಗ್ರಾಹ್ಯವಲ್ಲ. ★

## ಶ್ರೀವಾಣಿ

ಮಹಾತ್ಮ ಗಾಂಧಿಯವರು ಪಾನ ನಿರೋಧಿಗಳಾಗಿದ್ದರು. ಆದರೆ ದುರ್ದೈವವೆಂದರೆ ಗಾಂಧೀಜಿಯವರು ತಂದುಕೊಟ್ಟ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವ ಬಹುತೇಕ ಫಲಾನುಭವಿಗಳು ಪಾನವ್ಯಸನಿಗಳಾಗಿದ್ದಾರೆ ಇದಕ್ಕಿಂತ ಘೋರ ದುರಂತ ಇನ್ನೊಂದಿಲ್ಲ. ಮಹಾತ್ಮಾಜಿಯವರು ಪವಿತ್ರ ಜೀವನವೇ ಸ್ವಾತಂತ್ರ್ಯದ ಅಡಿಗಲ್ಲು ಎಂದು ಭಾವಿಸಿದ್ದರು. ಆದರಿಂದು ರಾಜಕಾರಣದಲ್ಲಿರುವವರು ಪಾವಿತ್ರ್ಯತೆಯನ್ನು ಗಾಳಿಗೆ ತೂರಿದ್ದಾರೆ. ಗಾಂಧೀಜಿ ಅರೆಬೆತ್ತಲೆ ನಡೆದಾಡಿದ ಪರಿಪೂರ್ಣ ಪುಣ್ಯಪುರುಷರು. ಈಗಿನ ನಾಯಕರ ಐಷಾರಾಮದ ಭೋಗಬಾಳುವೆ ಭಾರತೀಯ ಸಂಸ್ಕೃತಿಗೆ ಅಪಚಾರವೆಸಗುತ್ತಿದೆ. ದೇಶವನ್ನು ಕಿತ್ತು ತಿನ್ನುತ್ತಿದ್ದಾರೆ. ವಿದೇಶಗಳಿಂದ ಸಾಲತಂದು ಋಣ ಭಾರವನ್ನು ಹೇರುತ್ತಿದ್ದಾರೆ. ಸರಳ ಜೀವನವಂತೂ ಸಾಧ್ಯವೇ ಇಲ್ಲ ಎಂಬಂತೆ ನಡೆದಿದ್ದಾರೆ. ರಾಷ್ಟ್ರ ನಿರ್ಮಾಣ ಯಜ್ಞದಲ್ಲಿ ಹುತಾತ್ಮರಾದ ಹಿರಿಯನಾಯಕರ ಸ್ಮರಣೆಯಲ್ಲಿ ಅವರು ನಡೆದ ದಾರಿಯಲ್ಲಿ ನಡೆಯುತ್ತಿಲ್ಲ. ಆತ್ಮಶುದ್ಧಿಯಿಲ್ಲದೆ ಎಲ್ಲಾ ಪ್ರಾಣಿಗಳೊಂದಿಗೂ ಒಂದಾಗುವುದು ಅಸಾಧ್ಯ. ಆತ್ಮಶುದ್ಧಿಯಿಲ್ಲದೆ ಅಹಿಂಸಾಧರ್ಮವನ್ನು ಅನುಸರಿಸುತ್ತೇನೆ ಎನ್ನುವುದು ಬರಿಯ ಕನಸು. ಹೃದಯಶುದ್ಧಿಯಿಲ್ಲದವರಿಗೆ ಎಂದಿಗೂ ಪರಮಾತ್ಮನ ಸಾಕ್ಷಾತ್ಕಾರವಾಗುವುದಿಲ್ಲ, ಆದುದರಿಂದ ಆತ್ಮಶುದ್ಧಿಯೆಂದರೆ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಶುದ್ಧಿ ಎಂದು ಅರ್ಥವಾಗಬೇಕು. ಶುದ್ಧಿಯ ಸ್ವಭಾವ ಎಲ್ಲೆಡೆಯೂ ಹರಡುವುದಾದುದರಿಂದ, ಒಬ್ಬನು ಆತ್ಮಶುದ್ಧಿಯುಳ್ಳವನಾದರೆ, ಅವನ ಸುತ್ತಲಿನ ವಾತಾವರಣವೆಲ್ಲ ಶುದ್ಧವಾಗುವುದು ಎಂಬ ಮಹಾತ್ಮಗಾಂಧೀಜಿಯವರ ಮಾತುಗಳನ್ನಿಂದು ಘನ ಗಂಭೀರವಾಗಿ ಚಿಂತನ ಮಾಡಬೇಕಾಗಿದೆ.







# ಜಂಗಮಜ್ಯೋತಿ ಶ್ರೀ ನಿರ್ವಾಣ ಸ್ವಾಮಿಗಳು

– ಲಿಂ. ವಿದ್ವಾನ್ ಜಿ.ವಿ. ಶಿವಸ್ವಾಮಿ
ಬೆಂಗಳೂರು.

**ಕ**ರ್ನಾಟಕ ರಾಜ್ಯದಲ್ಲಿ ಅನೇಕ ಧಾರ್ಮಿಕ ಕ್ಷೇತ್ರಗಳು, ಜ್ಞಾನ, ಭಕ್ತಿ, ವೈರಾಗ್ಯದ ತವರು ಮನೆಗಳಾಗಿ ಬೆಳಗಿದೆ. ಬೆಂಗಳೂರು ಜಿಲ್ಲೆಯಲ್ಲಿ ಅರ್ಕಾವತಿ ನದಿಯ ದಡದಲ್ಲಿ ಪ್ರಕೃತಿ ಮಾತೆಯ ಮಡಿಲಲ್ಲಿ ಶಿವ ತೇಜಸ್ಸಿನಿಂದ ಕಂಗೊಳಿಸುವ ಒಂದು ಧರ್ಮಕ್ಷೇತ್ರ ಇದೆ. ಶಿವಯೋಗಪೂರ್ಣರೂ ಸದ್ಭಕ್ತಿ, ಸದಾಚಾರ, ಸವಿನಯಗಳಿಂದ ಕೂಡಿದ ''ಜಂಗಮಜ್ಯೋತಿ'' ಶ್ರೀ ನಿರ್ವಾಣಸ್ವಾಮಿಗಳ ಧರ್ಮಕ್ಷೇತ್ರವಾಗಿದೆ ಕನಕಪುರ ದೇಗುಲಮಠವು.

**ದೇ**ಗುಲಮಠ ಶ್ರೀಕ್ಷೇತ್ರವು ಜ್ಞಾನ-ದಾಸೋಹಗಳ ಸಂಗಮ. ಭಕ್ತಾದಿಗಳ ಕವಿಗಳ. ಯೋಗಿಪುಂಗವರ ಮನಸ್ಸನ್ನು ಆಕರ್ಷಿ- ಅವರುಗಳಿಗೆ ಆತ್ಮಾನಂದವನ್ನುಂಟು ಮಾಡುವ ಸಿದ್ಧಿಯ ತಾಣವಾಗಿದೆ. ಪೂಜ್ಯರ ದರ್ಶನಕ್ಕಾಗಿ ಬಂದವರು ಅವರ ತೇಜೋರಾಶಿಯನ್ನು ಕಂಡು ಭಕ್ತಿಯಿಂದ ಅವರ ಅಡಿದಾವರೆಗೆ ಎರಗುತ್ತಿದ್ದರು.

**ಲೋ**ಕದೊಳಗೆ ನೆಲಸಿದ್ದರೂ ಲೋಕದ ವಾಸನೆಗೆ ನಿಲುಕದಿರುವವನೇ ಗುರುವು. ಇಂತಹ ಗುರುವು ತನ್ನ ಬಳಿಗೆ ಬಂದ ಎಲ್ಲರನ್ನೂ ಸಮದೃಷ್ಟಿಯಿಂದ ನೋಡಿ ಅನುಗ್ರಹಿಸುವುದು ಪರಮಾತ್ಮನ ಲೀಲೆಯಲ್ಲದೆ ಬೇರೆಯಲ್ಲ. ಪೂಜ್ಯ ಶ್ರೀ ನಿರ್ವಾಣಸ್ವಾಮಿಗಳ ಸರಳ ಸ್ವಭಾವ, ವಾತ್ಸಲ್ಯಪೂರ್ಣ ವಾಣಿ ಎಲ್ಲರನ್ನೂ ಆಕರ್ಷಿಸುತ್ತಿತ್ತು. ಪೂಜ್ಯರು ಬಡವ-ಬಲ್ಲಿದ, ಉಚ್ಚ-ನೀಚ, ಶಿಕ್ಷಕ-ವಿದ್ಯಾರ್ಥಿ, ಮಂತ್ರಿ-ಪ್ರಜೆ ಎನ್ನದೆ ಎಲ್ಲರನ್ನೂ ಸಮದೃಷ್ಟಿಯಿಂದ ನೋಡುತ್ತಿದ್ದರು.

**ಶ**ರಣರ ಜೀವನದ ಅನುಭಾವ ಮಾರ್ಗದಲ್ಲಿ ಶ್ರೀಗಳು ನಡೆಯುತ್ತಿದ್ದರೂ, ಸರ್ವದಾ ಶಿವಯೋಗಿಗಳ ಗುಂಪೇ ಅವರೊಡನೆ ಇರುತ್ತಿತ್ತು. ಶಿವಶರಣರ ಸಂಗವೇ ಶಿವನ ಸಂಗವೆಂದು ಅವರು ತಿಳಿದಿದ್ದರು. ಯಾವಾಗಲೂ ಶಿವಶರಣರ ವಚನಗಳನ್ನು ನುಡಿದು ಅದರಂತೆ ನಡೆಯುವವರಾಗಿದ್ದರು.

***ಸಂಗಲೇಸು ಸಾಧು ಸತ್ಪುರುಷರ, ಸಂಗಲೇಸು ಸದ್ಭಕ್ತ ಶರಣ ಜನಂಗಳ, ಸಂಗಲೇಸು ಸುಜ್ಞಾನ ಸಹವಾಸಿಗಳ, ಸಂಗಲೇಸು ಅಖಂಡೇಶ್ವರ ಲಿಂಗದ ಕೂಡಿದ ಸದ್ ಭೋಗಿಗಳ !***

**ಸಾ**ಧು ಸತ್ಪುರುಷರ ಸಂಗಲೇಸು, ಅನುಭಾವಿಗಳ ಸಂಗ ಬಹುಲೇಸು, ಲಿಂಗಸ್ವರೂಪಿಯಾದ ಶರಣ, ಲಿಂಗನಯನದಲ್ಲಿ ನೋಡುತ್ತಾನೆ. ಲಿಂಗಮಯ ಜಿಹ್ವೆಯಲ್ಲಿ ನುಡಿಯುತ್ತಾನೆ. ಲಿಂಗಮಯ ಹಸ್ತದಲ್ಲಿ ಮುಟ್ಟುತ್ತಾನೆ, ಲಿಂಗಮಯ ನಾಸಿಕದಲ್ಲಿ ಉಸಿರಾಡುತ್ತಾನೆ. ಲಿಂಗಮಯ ಕರ್ಣದಲ್ಲಿ ಕೇಳುತ್ತಾನೆ. ಲಿಂಗಮಯದಲ್ಲಿ ಚಲಿಸುತ್ತಾನೆ. ಸರ್ವಾಂಗ ಲಿಂಗಮಯನಾಗಿರುತ್ತಾನೆ. ಇಂಥ ಶರಣರ ಸಂಗವೇ ಪಾವನ, ಅವರ ಮಾರ್ಗದರ್ಶನ ಶಿವಾನುಭವದ ದಿವ್ಯ ದರ್ಶನ. ಇವರ ಕೂಡ ಒಡನಾಡುವುದೇ ಮಹಾಜ್ಯೋತಿಯ ದಿವ್ಯಾನುಭವವೆಂದು ಶ್ರೀ ನಿರ್ವಾಣಯತಿಗಳು ನುಡಿಯುತ್ತಿದ್ದರು. ಕರ್ನಾಟಕದ ಎಲ್ಲ ಪ್ರಾಮುಖ್ಯ ಮಠಾಧಿಪತಿಗಳೊಡನಾಡಿಗಳಾಗಿದ್ದರು. ಶ್ರೀಗಳವರು ಹೋದಲ್ಲೆಲ್ಲ ಅವರೊಡನೆ ಶಿವಯೋಗಿ ಪುಂಗವರ ಗುಂಪೇ ಇರುತ್ತಿತ್ತು. ಜೀವಾತ್ಮರನ್ನು ಪರಮಾತ್ಮರನ್ನಾಗಿಸುವುದರ ಬಗ್ಗೆಯೇ ಅವರ ನಿರಂತರ ಚಿಂತನೆಯಾಗಿತ್ತು.

**ಜಂ**ಗಮ ಪುಂಗವರು ಶಿವಪೂಜೆಯಲ್ಲಿ ಭಕ್ತಿಭಾವದಿಂದ ಕೂಡಿ, ವಿಶ್ವ ವ್ಯಾಪಿಯಾದ ಲಿಂಗಯ್ಯನಲ್ಲಿ ತನ್ಮಯರಾಗುತ್ತಿದ್ದರು. ಅವರ ಪಾದಪೂಜಾ ವೈಭವ ನೆರೆದಿದ್ದ ಭಕ್ತವೃಂದವನ್ನು ಮೈಮರೆಸುತ್ತಿತ್ತು. ಅವರ ಮಂತ್ರಮಯ ವಾಣಿ ನೆರೆದಿದ್ದ ಹರಗುರು ಚರಮೂರ್ತಿಗಳಿಗೆ ಸ್ಫೂರ್ತಿ ನೀಡುತ್ತಿದೆ.

**ದ**ರ್ಶನಕ್ಕಾಗಿ ಕಾದಿದ್ದ ಭಕ್ತರಿಗೆ ಕೆಲವೇ ಮಾತುಗಳಿಂದ ವಿಭೂತಿ ಪುರುಷರ ನುಡಿಗಳನ್ನು ಹೇಳಿ ವಿವರಣೆ ಮಾಡುತ್ತಿದ್ದರು.

*ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ*
*ದುರ್ಜನರ ಕೂಡ ಒಡನಾಟ ಬಚ್ಚಲ*
*ರೊಚ್ಚಿನಂತಿಹುದು ಸರ್ವಜ್ಞ*

ಸತ್ಪುರುಷರ ಸಂಗದಿಂದ ಮನಸ್ಸಿನ ಮೇಲೆ ಬಹಳ ಪರಿಣಾಮ ವಾಗುವುದು. ಜ್ಞಾನದ ಬಲದಿಂದ ಅಜ್ಞಾನ ದೂರವಾದಂತೆ, ಜ್ಯೋತಿಯ ಬೆಳಕಿನಿಂದ ಕತ್ತಲೆ ದೂರವಾದಂತೆ, ಸತ್ಯದ ಸುಳಿವಿನಿಂದ ಅಸತ್ಯವು ದೂರವಾದಂತೆ. ಗುರುವಿನ ದರ್ಶನದಿಂದ ನರನಿಗೆ ನರತ್ವವು ಅಳಿದು ಶಿವತ್ವವು ಬರುವುದು. ಇಂಥವರ ಸಂಗದಿಂದ ಮುಕ್ತಿಯು ಸುಲಭವಾಗಿ ದೊರೆಯುವುದು ಎನ್ನುತ್ತಿದ್ದರು.

ಶ್ರೀಗಳು ಶಮೆ, ದಮೆ, ವಿವೇಕ, ವೈರಾಗ್ಯ, ಶಾಂತಿ, ಕಾರುಣ್ಯ, ಶ್ರದ್ಧೆ, ಸತ್ಯ, ಸದ್ಭಕ್ತಿ ಶಿವಜ್ಞಾನಗಳ ನಿಧಿಯಾಗಿ ಶಿವಾನುಗ್ರಹಕ್ಕಾಗಿ ಬಂದವರನ್ನು ಶಿವಧರ್ಮದ ಮಾರ್ಗದ ಕಡೆಗೆ ತಿರುಗಿಸುತ್ತಿದ್ದರು. ''ಅಗ್ನಿಯೊಡನಾಡಿದಕಾಷ್ಠಗಳು ರೂಪವನ್ನಳಿದು ಕೊಂಡು ಭಸ್ಮೀಭೂತವಾದಂತೆ. ಜಂಗಮ ಜ್ಯೋತಿಗಳಾದ ಶ್ರೀನಿರ್ವಾಣ ಸ್ವಾಮಿಗಳ ಸಂಪರ್ಕದಿಂದ ಬಂಧನವ ಕಳೆದು ಕೊಂಡು ಪರಿಶುದ್ಧರಾಗುತ್ತಿದ್ದರು.

## ದಾಸೋಹದಲ್ಲಿ ಮಾತೃ ಹೃದಯ

ಶ್ರೀ ದೇಗುಲಮಠದಲ್ಲಿ ನಿತ್ಯ ನಡೆಯುವ ದಾಸೋಹ ಅವರ್ಣನೀಯ. ಮಠಕ್ಕೆ ಬಂದವರನ್ನು ''ಊಟ ಮಾಡಿದಿರಾ?'' ಎಂದು ಆತ್ಮೀಯವಾಗಿ ವಿಚಾರಿಸುತ್ತಿದ್ದುದೇ ಅವರ ಮಹಾಮಂತ್ರ. ದಾಸೋಹದಲ್ಲಿ ಶ್ರೀ ಉದ್ಧಾನ ಶಿವಯೋಗಿಗಳಂತೆಯೇ ಉದಾರತೆಯ ಪ್ರತಿಮೂರ್ತಿಗಳು. ''ತನ್ನದೆಂಬುದು ಯಾವುದೂ ಇಲ್ಲ, ಎಲ್ಲವೂ ಶಿವನದೇ'' ಎಂಬ ಭಾವನೆ ಅವರದು. ತನು, ಮನ-ಧನಗಳನ್ನು ಗುರು, ಲಿಂಗ, ಜಂಗಮಕ್ಕೆ ಸಮರ್ಪಿಸಿ ತಾವು ಆ ಆನಂದದಲ್ಲಿ ತಲ್ಲೀನರಾಗುವುದೇ ದಾಸೋಹವೆಂದು ಅವರು ಅರಿತ್ತಿದ್ದರು.

ವಿದ್ಯಾರ್ಥಿಗಳಲ್ಲಿ ಅಮಿತ ಪ್ರೇಮ. ಒಮ್ಮೊಮ್ಮೆ ಅವರೇ ನಿಂತು ಬಡಿಸುತ್ತಿದ್ದರು. 'ಚೆನ್ನಾಗಿ ಊಟ ಮಾಡಿರಿ' 'ನೀವೆಲ್ಲಾ ಶಿವನ ಮಕ್ಕಳು' 'ಚೆನ್ನಾಗಿ ಓದಿರಿ', 'ಕಾಯಕ ಮಾಡಬೇಕು', 'ಸ್ವಾರ್ಥವೇ ಅಧರ್ಮ, ನಿಸ್ವಾರ್ಥವೇ ಧರ್ಮ'. ಇದು ಅವರ ನಿತ್ಯದ ಉಪದೇಶ ವಾಣಿಯಾಗಿತ್ತು.

'ನಿಸ್ವಾರ್ಥಿಯಾದವನೇ ಧರ್ಮನಿಷ್ಠ ಮತ್ತು ಶಿವನಿಗೆ ಹತ್ತಿರ'. ಸ್ವಾರ್ಥಿಯಾದವ ಯಾವ ಪುಣ್ಯ ಕ್ಷೇತ್ರಗಳನ್ನು ತಿರುಗಿ ಬಂದರೂ, ಕಾವಿಧರಿಸಿ ವಿಭೂತಿ ಬಳಿದುಕೊಂಡರೂ ಶಿವನಿಗೆ ದೂರವೇ' ಎಂಬುದು ಅವರ ತಿಳುವಳಿಕೆಯಾಗಿತ್ತು.

ವಿದ್ಯಾರ್ಥಿಗಳಿಗೆ ದೈವಭಕ್ತಿ, ಕಾಯಕ ನಿಷ್ಠೆ, ತ್ಯಾಗಮಯ ಜೀವನ, ರಾಷ್ಟ್ರಪ್ರೇಮ, ಮುಂತಾದ ವಿಷಯಗಳನ್ನು ಬೋಧಿಸಿ ಅವರನ್ನು ಒಳ್ಳೆಯ ಸುಸಂಸ್ಕೃತರನ್ನಾಗಿ ಮಾಡುತ್ತಿದ್ದರು. ದೇಗುಲ ಮಠವನ್ನು ಅಭಿವೃದ್ಧಿಯ ಪಥದಲ್ಲಿ ಮುನ್ನಡೆಸಿದ ಮಹಾಯೋಗಿಗಳು ಆ ಪ್ರಾಂತ್ಯದ ಮಕ್ಕಳ ಜ್ಞಾನಾಭಿವೃದ್ಧಿಗಾಗಿ ಸಂಸ್ಕೃತ-ವೇದ ಪಾಠ ಶಾಲೆ, ಮಾಧ್ಯಮಿಕ ಶಾಲೆ, ಅನೇಕ ಪ್ರೌಢಶಾಲೆಗಳನ್ನು ತೆರೆದು ಸಾವಿರಾರು ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿರುತ್ತಾರೆ. ಎಲ್ಲ ವರ್ಗದ ಮಕ್ಕಳಿಗೆ ಸುಮಾರು ೧೫.೦೦ ಬಡ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನಿಲಯವನ್ನು ತೆರೆದು, ಜ್ಞಾನಪ್ರಸಾರಕ್ಕೆ ಅನುವು ಮಾಡಿಕೊಟ್ಟಿದ್ದಾರೆ.

ಎಲ್ಲಾ ಪ್ರಾಣಿಗಳಲ್ಲಿಯೂ ಶ್ರೀಗಳವರಿಗೆ ಅಪಾರ ದಯೆ. ಮಠದ ಗೋವುಗಳು, ನಾಯಿ, ಬೆಕ್ಕು, ಪಕ್ಷಿಗಳನ್ನು ಕೂಡ ಮಕ್ಕಳಂತೆ ಜೋಪಾನ ಮಾಡುತ್ತಿದ್ದರು. ಎಲ್ಲರೂ ಮಲಗಿ ನಿದ್ರಿಸುತ್ತಿರುವಾಗ ಮಠದ ಹಸುಗಳಿಗೆ ತಾವೇ ಹೋಗಿ ಹುಲ್ಲು ಹಾಕಿ ಬರುತ್ತಿದ್ದುದುಂಟು. ಮಠದ ಸೇವಕ ವರ್ಗ ಯಾವ ಪ್ರಾಣಿಗಾದರೂ ನೋವು ಮಾಡಿದ ವಿಷಯ ಸ್ವಾಮೀಜಿಯವರಿಗೆ ತಿಳಿದರೆ ಪ್ರಸಾದ ಸೇವಿಸುತ್ತಿರಲಿಲ್ಲ. ''ಪರೋಪಕಾರಾಯ ಸತಾಂ ವಿಭೂತಯಃ'' ಎಂಬ ನುಡಿಯಂತೆ ಶ್ರೀಗಳವರು ಪರೋಪಕಾರಕ್ಕಾಗಿಯೇ ಶ್ರಮಿಸಿದರು.

## ಜಂಗಮ ಜ್ಯೋತಿ

ಅವರ ಕೃಪಾಶ್ರಯದಲ್ಲಿ ಅನೇಕ ಜನ ಪರಗುರು-ಚರಮೂರ್ತಿಗಳು ಬೆಳೆದು, ನಾಡಿಗೆ ಆದರ್ಶರಾಗಿದ್ದಾರೆ. ಅವರ ಕರಕಮಲ ಸಂಜಾತರಾದ ಶ್ರೀ ಮಹಲಿಂಗ ಸ್ವಾಮಿಗಳು ಅವರಂತೆಯೇ ವಿಶಾಲ ಗುಣದವರಾಗಿದ್ದರು. ಮಿತಭಾಷಿಗಳು, ಸತ್ಯ ಶುದ್ಧ ಆಚರಣೆ, ಕಿರಿಯ ವಯಸ್ಸಿನಲ್ಲಿಯೇ ಹಿರಿದಾದ ಅನುಭಾವಿಗಳಾಗಿದ್ದವರು. ಪೂಜ್ಯ ಹಿರಿಯ ಗುರುಗಳ ಮಾರ್ಗದಲ್ಲಿಯೇ ನಡೆದು ಸರ್ವಜನ ವಂದ್ಯರಾಗಿದ್ದರು.

ತಪೋಪುಂಗವರಾದ ಶ್ರೀ ನಿರ್ವಾಣ ಯತಿಗಳು, ಜ್ಞಾನ ವೃದ್ಧರೂ, ಆಚಾರ ಪರಿಪೂರ್ಣರೂ, ವೈರಾಗ್ಯ ನಿಧಿಗಳೂ ಆಗಿ ಶಿವತತ್ವದ ಅನುಭಾವಸಾರವನ್ನು ಸವಿದು, ಶಿವಸ್ವರೂಪಿಗಳೇ ಆಗಿದ್ದರು. ''ಆತ್ಮಾರ್ಥೇ ಪೃಥಿವೀಂತ್ಯಜೇತ್'' ಎಂಬ ನುಡಿಯಂತೆ. ಶಿವ ಸಾಕ್ಷಾತ್ಕಾರವನ್ನರಿಸಿ ಶಿವನಲ್ಲಿ ಬೆರೆಯಲು ಪ್ರಪಂಚವನ್ನು ತ್ಯಜಿಸಿಬೇಕಾಯಿತು. ಶಿವ ಮನವೆಂಬ ದೇಗುಲದಲ್ಲಿ ನಿರ್ವಾಣಯತಿಯೆಂಬ ಕರ್ಪೂರವು ಉರಿದು ಮಹಾಜ್ಯೋತಿಯಲ್ಲಿ ಈ ಜಂಗಮ ಜ್ಯೋತಿ ಬೆರೆಯಿತು. ಅವರ ತಪೋಪ್ರಭೆ ಮಾತ್ರ ಎಂದೆಂದೂ ಮಾನವ ಕೋಟಿಯ ಉದ್ಧಾರಕ್ಕಾಗಿ ಇಹದಲ್ಲಿಯೇ ಉಳಿದಿದೆ. ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳವರು ಫೆಬ್ರುವರಿ ೬, ೧೯೭೨ರಲ್ಲಿ ಲಿಂಗೈಕ್ಯರಾದರು.

★







# ರಾಷ್ಟ್ರಪ್ರೇಮಿ, ಪ್ರಜಾಪ್ರಭುತ್ವವಾದಿ ರಾಮಕೃಷ್ಣ ಹೆಗಡೆ

– ಎಂ.ಪಿ. ಪ್ರಕಾಶ್
ಮಾಜಿ ಸಚಿವರು ಮತ್ತು ವಿಚಾರವಾದಿಗಳು,
ಬೆಂಗಳೂರು.

ರಾಮಕೃಷ್ಣ ಹೆಗಡೆಯವರು ಒಬ್ಬ ವ್ಯಕ್ತಿಯಲ್ಲ. ಶಕ್ತಿ. ಹಿರಿಯರಿಗೆ ರಾಮಕೃಷ್ಣನಾಗಿ, ಗೆಳೆಯರಿಗೆ 'ಆರ್.ಕೆ.'ಯಾಗಿ, ನಮಗೆಲ್ಲಾ ಹೆಗಡೆಯಾಗಿದ್ದ ರಾಮಕೃಷ್ಣ ಹೆಗಡೆಯವರು ಈಗ ನಮ್ಮೊಂದಿಗಿಲ್ಲ. ಶ್ರೇಷ್ಠ ಬದುಕನ್ನು ಬದುಕಿದ ಹಿರಿಯ ಜೀವಿಗಳಲ್ಲಿ ಅವರೂ ಒಬ್ಬರು. ಕರ್ನಾಟಕದ ಜನಮಾನಸದಲ್ಲಿ ತಮ್ಮ ಹೆಜ್ಜೆ ಗುರುತನ್ನು ಅವರು ಬಿಟ್ಟಿದ್ದಾರೆ. ಕಡಲ ತೀರದ ಕಾರವಾರ ಜಿಲ್ಲೆಯಿಂದ ಹೆಗಡೆಯವರು ಬಹುದೂರ ಬಂದಿದ್ದಾರೆ. ಕಳೆದ ಐದು ದಶಕಗಳಲ್ಲಿ ಸಾರ್ವಜನಿಕ ಜೀವನದಲ್ಲಿದ್ದ ಅವರು ನಾಡಿನ ಹಾಗೂ ರಾಷ್ಟ್ರ ರಾಜಕಾರಣದಲ್ಲಿ ಹೆಸರು ಮಾಡಿದ್ದಾರೆ ಹಾಗೂ ತಮ್ಮ ಛಾಪನ್ನು ಒತ್ತಿದ್ದಾರೆ. ಜನತಾ ಪರಿವಾರವು ಹಿರಿಯರಾದ ಜೆ.ಎಚ್. ಪಟೇಲ್ ಮತ್ತು ಹೆಗಡೆಯವರನ್ನು ಕಳೆದುಕೊಂಡು ಅನಾಥ ಪ್ರಜ್ಞೆಗೆ ಒಳಗಾಗಿದೆ. ರಾಜಕೀಯದಲ್ಲಿ ಭಿನ್ನಾಭಿಪ್ರಾಯ ಬರಬಹುದು. ಒಂದು ವಿಷಯವನ್ನು ಅಥವಾ ಘಟನೆಯನ್ನು ಅರ್ಥೈಸುವಾಗ ಮತ್ತು ಪರಾಮರ್ಶಿಸುವಾಗ ಒಬ್ಬೊಬ್ಬರ ದೃಷ್ಟಿ ವಿಭಿನ್ನ ಇರುವುದು ಸಹಜ. ಆದರೆ ಅದು ಪರಸ್ಪರ ವಿಶ್ವಾಸಕ್ಕೆ ಎಂದೂ ಅಡ್ಡಿ ಬರಲಾರದು. ಅಡ್ಡಿ ಬರಬಾರದು ಕೂಡ. ಅವರು ರಾಷ್ಟ್ರಪ್ರೇಮಿ, ಪ್ರಜಾಪ್ರಭುತ್ವ ವಾದಿಯಾಗಿದ್ದರು. ಅವರು ಗಾಂಧೀಜಿಯವರ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದರು. ವಿನೋಬಭಾವೆಯವರ ಆಶ್ರಮದಲ್ಲಿ ತರಬೇತಿ ಪಡೆದಿದ್ದರು. ಆದರೆ ಅವರ ಆದರ್ಶ ವ್ಯಕ್ತಿ ಪಂಡಿತ ಜವಾಹರ್‌ಲಾಲ್ ನೆಹರೂ ಆಗಿದ್ದರು. ಹಾಗಾಗಿ ಅವರ ಚಿಂತನೆ, ನಡವಳಿಕೆ ನೆಹರೂರವರ ಹೆಜ್ಜೆ ಗುರುತುಗಳೊಂದಿಗೆ ಸಾಗಿತ್ತು.



ವಕೀಲರಾಗಿ, ಪ್ರವರ್ತಕರಾಗಿ ದೂರದ 'ದೊಡ್ಡಮನೆ'ಯ ರಾಮಕೃಷ್ಣ ಹೆಗಡೆಯವರು ಬದುಕನ್ನು ಪ್ರಾರಂಭಿಸಿದವರು. ಅವರ ಮನೆತನಕ್ಕೆ ತನ್ನದೇ ಆದ ಸ್ವಾತಂತ್ರ್ಯ ಹೋರಾಟದ ವೀರಕಥೆ ಹಾಗೂ ತ್ಯಾಗದ ಇತಿಹಾಸವಿದೆ. ಬಾಲ್ಯದಲ್ಲಿ ತಂದೆಯನ್ನು ಕಳೆದು ಕೊಂಡ ರಾಮಕೃಷ್ಣರು ತಾಯಿಯ ಅಕ್ಕರೆಯಲ್ಲಿ, ಅಣ್ಣ ಗಣೇಶ ಹೆಗಡೆಯವರ ಮಾರ್ಗದರ್ಶನದಲ್ಲಿ ಬೆಳೆದವರು. ಕರನಿರಾಕರಣೆ ಚಳವಳಿಯಲ್ಲಿ ಭಾಗವಹಿಸುವುದರೊಂದಿಗೆ ಇವರ ಕಥೆ ಪ್ರಾರಂಭವಾಗುತ್ತದೆ. ಇವರ ಪೂರ್ವಜರು ಒಂದು ಜೈನ ಕುಟುಂಬದ ಆಸ್ತಿಯನ್ನು ಕೊಂಡಿದ್ದರಂತೆ. ಆಸ್ತಿಯನ್ನು ರೂಢಿಸಿಕೊಂಡು ಸುತ್ತ ನಾಡಿನಲ್ಲಿ ಹೆಸರುವಾಸಿಯಾದ ಮನೆತನವಾಗಿ, ಅಡಿಕೆ, ಭತ್ತದ ಅಂಗಡಿಗಳೊಂದಿಗೆ, ಬತ್ತದ ಗಿರಣಿಯನ್ನು ಸಹಾ ಹೊಂದಿದ್ದರು. ತಮ್ಮ ಏಳಿಗೆಯನ್ನು, ತಮಗೆ ಆಸ್ತಿ ಮಾರಿದ ಜೈನ ಕುಟುಂಬದ ದೊಡ್ಡತನವೆಂದು, ಅವರ ಹೆಸರಿನಲ್ಲಿ ಒಂದು ನಂದಾದೀಪವನ್ನು ದೊಡ್ಡ ಮನೆಯವರು ಇಂದಿಗೂ ಉರಿಸುತ್ತಿದ್ದಾರೆ. ಆ ದೊಡ್ಡ ಮನಸ್ಸಿನ ದೊಡ್ಡ ಮನೆಯಲ್ಲಿ ಬೆಳೆದು ಬಂದ ಹೆಗಡೆಯವರಿಗೆ ಸಣ್ಣತನದ ಸೋಂಕು ತಗಲಿಲ್ಲ. ಅವರು ಚಿಕ್ಕವರಿದ್ದಾಗ, ಶಿವರಾಮ ಕಾರಂತರು ಅವರ ಊರಿಗೆ ಬರುತ್ತಾರೆ. ಅವರ ಗೌರವಾರ್ಥ ಸಭೆ ಏರ್ಪಾಡಾಗುತ್ತದೆ. ಇವರ ಚಿಕ್ಕಪ್ಪ ಕೇವಲ ಐದು ರೂಪಾಯಿಗಳ ವಂತಿಗೆಯನ್ನು ಪಡೆಯುತ್ತಾರೆ. ಇದರಿಂದ ಅಸಮಾಧಾನಗೊಂಡ ರಾಮಕೃಷ್ಣರು, ತಮ್ಮ ದಿನಚರಿಯಲ್ಲಿ ಈ ಘಟನೆಯನ್ನು ಪ್ರಸ್ತಾಪ ಮಾಡುತ್ತಾರೆ. ಅವರ ಎಳೆಯ ಮನಸ್ಸು ಎಂತಹ ಪಕ್ವತೆಗೆ ಒಳಗಾಗಿತ್ತು ಎನ್ನುವುದನ್ನು ಮೇಲಿನ ಪ್ರಸಂಗ ತೋರಿಸಿಕೊಡುತ್ತದೆ.

ಅವರ ಅಕ್ಕ ಮಹಾದೇವಿ ತಾಯಿ ಬಾಲ ವಿಧವೆ. ಆಗ ಅವರ ಮನೆಗೆ ಬಂದ ಮಹಾತ್ಮ ಗಾಂಧೀಜಿ, ಅನಕ್ಷರಸ್ಥಳಾದ, ವೈಧವ್ಯಕ್ಕೆ ಗುರಿಯಾದ ಮಹಾದೇವಿಯನ್ನು ತಮ್ಮೊಂದಿಗೆ ಆಶ್ರಮಕ್ಕೆ ಕರೆದು ಕೊಂಡು ಹೋಗುತ್ತಾರೆ. ಆಶ್ರಮದ ಬದುಕಿನ ಮೂಸೆಯಿಂದ ಪುಟಕ್ಕಿಟ್ಟ ಚಿನ್ನದಂತೆ ಹೊರಬಂದ ಮಹಾದೇವಿ ಸುತ್ತಮುತ್ತಲಿನವರೆಲ್ಲರಿಗೂ ಅಕ್ಕ ಎನಿಸಿದ್ದಾರೆ. ಬೆಂಗಳೂರಿನ ವಲ್ಲಭ ವಿದ್ಯಾನಿಕೇತನದಲ್ಲಿ ಗಾಂಧಿಧ್ಯಾನದಲ್ಲಿ ನಿರತರಾಗಿದ್ದಾರೆ. ಬಾಳ ಮುಸ್ಸಂಜೆಯಲ್ಲಿ, ಗಾಂಧೀಜಿ ಪ್ರಣೀತ ತತ್ವಗಳನ್ನು ಪಾಲಿಸುತ್ತಾ



ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಶ್ರೀ ರಾಮಕೃಷ್ಣ ಹೆಗಡೆಯವರು

ಆಶ್ರಮವಾಸಿಗಳ ತಾಯಿಯಾಗಿದ್ದಾರೆ. ಮಹಾದೇವಿ ಅಕ್ಕ ಪರಿಶಿಷ್ಟ ವರ್ಗದ ಅನಾಥ ಮಗಳನ್ನು ಸಾಕಿಕೊಂಡು ಅಕ್ಕರೆಯಿಂದ ತಾಯಿಯಾಗಿದ್ದಾಳೆ.

ಆಶ್ರಮದಿಂದ ಒಮ್ಮೆ ದೊಡ್ಮನೆಗೆ ಬರಬೇಕೆಂದು ಹಿರಿಯರು ಆಗ್ರಪಡಿಸುತ್ತಾರೆ. ನನ್ನೊಂದಿಗೆ ಬರುವ ನನ್ನ ಮಗಳನ್ನೂ ನೀವು ನನ್ನನ್ನು ಕಂಡಷ್ಟೇ ಗೌರವ, ಪ್ರೀತಿಯಿಂದ ಕಾಣುವುದಾದರೆ ಊರಿಗೆ ಬರುತ್ತೇನೆಂದ ದೊಡ್ಡ ಜೀವಿ ಅವರು. ಸ್ವಾತಂತ್ರ ಸಂಗ್ರಾಮದಲ್ಲಿ ಮನೆಮಂದಿಯೆಲ್ಲಾ ಜೈಲಿಗೆ ಹೋದವರು. ಕರ ಕೊಡಲು ನಿರಾಕರಿಸಿದ್ದಕ್ಕಾಗಿ ಅವರ ಸ್ವಾತಂತ್ರ್ಯ ಹೋರಾಟ ವಿದ್ರೋಹ ವೆಂದು, ಅಂದಿನ ಆಳರಸರಾದ ಬ್ರಿಟಿಷರು ಅವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡಿದ್ದರು. ರಾಮಕೃಷ್ಣ ಸಹಾ ತಮ್ಮ ಮನೆಯ ಈ ಅಪ್ಪಟ ದೇಶಪ್ರೇಮದಿಂದಾಗಿ ಪ್ರೇರಿತರಾಗಿ ವಿನೋಬ ಆಶ್ರಮ ಸೇರಿದವರು. ವಾರ್ಧಾದ ಸುತ್ತಲಿನ ಗ್ರಾಮದ ಮಲಮೂತ್ರ ಬಳಿಯುವ ಜಲಗಾರನ (ಭಂಗಿ) ಕೆಲಸವನ್ನು ವಿನೋಬಾಜಿ ಕೊಟ್ಟಾಗ, ಹಿಂದೆ ಮುಂದೆ ನೋಡದೆ, ಕಸಬರಿಕೆ, ಪುಟ್ಟಿಯನ್ನು ಕೈಗೆ ತೆಗೆದುಕೊಂಡವರು. ತನ್ನ ಯೌವನದ, ರೂಪಿನ, ಬ್ರಾಹ್ಮಣತ್ವದ, ಅಹಂಕಾರವನ್ನು ಮುರಿಯಲೂ, ಈ ಕೆಲಸವನ್ನು ನನಗೆ ಕೊಟ್ಟಿರಬಹುದೆಂದು ತಿಳಿದು, ಆಶ್ರಮ ಧರ್ಮಕ್ಕೆ ಚ್ಯುತಿ ಬರದಂತೆ ನಡೆದ ಅಪರೂಪದ ವ್ಯಕ್ತಿ ಹೆಗಡೆಯವರು. ಮುಂದೆ ಕಾಶಿ ಹಾಗೂ ಅಲೀಘಡದಲ್ಲಿ ಸ್ನಾತಕೋತ್ತರ ಹಾಗೂ ಕಾನೂನು ಪದವಿ ಪಡೆದು ವಕೀಲ ವೃತ್ತಿ ಕೈಗೊಂಡರು. ಆದರೆ ಬಹಳ ಕಾಲ ಆ ವೃತ್ತಿಯಲ್ಲಿ ಉಳಿಯದೆ, ಅವರ ರಾಜಕೀಯ ಗುರುವಾದ ಮೋಟಿನಸರ ಹೆಗಡೆಯವರ ಪ್ರೇರಣೆ ಪ್ರೋತ್ಸಾಹದಿಂದ ೧೯೫೭ರಲ್ಲಿ ಪ್ರಥಮ ಬಾರಿಗೆ ವಿಧಾನಸಭೆಗೆ ಸ್ಪರ್ಧಿಸಿ, ವಿಜೇತರಾಗಿ, ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಉಪಮಂತ್ರಿಯಾಗಿ ಸೇವೆ ಸಲ್ಲಿಸಿದ್ದರು. ಆಗ ನಮ್ಮ ತಂದೆ ವಿಧಾನಸಭಾ ಸದಸ್ಯರಾಗಿದ್ದುದರಿಂದ, ಅವರ ನೆರವಿನೊಂದಿಗೆ, ನಾನು ಸೇಂಟ್ ಜೋಸೆಫ್ ಕಾಲೇಜಿನ ವಿದ್ಯಾರ್ಥಿ ನಾಯಕನಾಗಿ ಅವರನ್ನು ನಮ್ಮ ಸಂಘದ ಉದ್ಘಾಟನೆಯಾಗಿ ಆಹ್ವಾನಿಸಿದ್ದೆ. ಅಂದಿನಿಂದ ಅವರನ್ನು ನಾನು ಬಹಳ ನಿಕಟವಾಗಿ ನೋಡುತ್ತಾ ಬಂದಿದ್ದೇನೆ. ಅವರು ಬೆಳೆದ ಬಗೆ. ನಡೆದ ದಾರಿ ತುಂಬಾ ವಿಸ್ಮಯಕಾರಿ ಹಾಗೂ ಅನುಕರಣೀಯ.

ಅಂದು ಮಂತ್ರಿಯಾದ ಹೆಗಡೆಯವರು ಹಿಂತಿರುಗಿ ನೋಡಲಿಲ್ಲ. ತಮ್ಮ ಬದುಕಿನಲ್ಲಿ ಅನೇಕ ಏಳುಬೀಳುಗಳನ್ನು ಕಂಡಿದ್ದಾರೆ. ಸಮಕಾಲೀನ ಚರಿತ್ರೆಯ ಭಾಗವೂ ಆಗಿದ್ದಾರೆ. ಪ್ರಾರಂಭದಿಂದಲೂ ಅವರು ಅಧಿಕಾರ ವಿಕೇಂದ್ರೀಕರಣದ ಹರಿಕಾರರು. ಅವರು ಪಂಚಾಯತಿ ರಾಜ್ಯ ಹಾಗೂ ಸಹಕಾರ ಮಂತ್ರಿಗಳಾಗಿ ರೂಪಿಸಿದ್ದ ಇವತ್ತಿನಷ್ಟು ಕ್ರಾಂತಿಕಾರಕವಲ್ಲದ ಪಂಚಾಯತಿ ರಾಜ್ಯ ಮಸೂದೆ. ಆವತ್ತಿನ ಕಾಂಗ್ರೆಸ್ ಶಾಸಕಾಂಗ ಪಕ್ಷದ ಸಭೆಯಲ್ಲಿ ಕೇವಲ ಮೂರು ಮತಗಳ ಅಂತರದಲ್ಲಿ ತಿರಸ್ಕರಿಸಲ್ಪಟ್ಟಿತ್ತು. ಆಗ ಅವರು ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟರು. ಆದರೆ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪನವರು ಇವರ ರಾಜೀನಾಮೆಯನ್ನು ಒಪ್ಪಕೊಳ್ಳದೆ, ಹಣಕಾಸು ಹಾಗೂ ಅಬಕಾರಿ ಖಾತೆಯನ್ನು ಕೊಟ್ಟರು. ಅಂದಿನ ಶಾಸಕಾಂಗ ಪಕ್ಷದ ಮನೋಭಾವ, ನಂತರ ರಾಷ್ಟ್ರಕ್ಕೆ ಮಾದರಿಯಾದ ಜಿಲ್ಲಾ ಪರಿಷತ್ ಹಾಗೂ ಮಂಡಲ ಪಂಚಾಯಿತಿ ಕಾಯ್ದೆಯ ಅನುಷ್ಠಾನದಲ್ಲಿ ಅವರು ತೋರಿಸಿದ ಬದ್ಧತೆ ಮತ್ತು ಜನಪ್ರತಿನಿಧಿಗಳ ಬದಲಾದ ಮನೋಧರ್ಮ, ನಮ್ಮ ದೇಶದ ರಾಜಕೀಯ ಹಾಗೂ ಸಾಮಾಜಿಕ ಸ್ಥಿತ್ಯಂತರದ ಸಂಕೇತ. ಅಂತಹ ಕ್ರಾಂತಿಕಾರಕ ವ್ಯವಸ್ಥೆಯನ್ನು ತರುವಾಗ ನಾನು ಅವರ ಮಂತ್ರಿಮಂಡಲದಲ್ಲಿದೆ ಎನ್ನುವುದು ಮತ್ತು ಆ ಖಾತೆಯನ್ನು ನಾನು ನಿರ್ವಹಿಸಿದ್ದು, ನನ್ನ ಸೌಭಾಗ್ಯವೆಂದೇ ಭಾವಿಸುತ್ತೇನೆ.

ದಿವಂಗತ ಅಬ್ದುಲ್ ನಜೀರ್‌ಸಾಬರ ಹೋರಾಟದ ಹಿನ್ನೆಲೆಯಲ್ಲಿ ಹೆಗಡೆಯವರ ರಾಜಕೀಯ ಇಚ್ಛಾಶಕ್ತಿ ಹಾಗೂ ದೂರದೃಷ್ಟಿಯಿತ್ತು. ಇದು ಅವರು ಮಾಡಿದ ಸಾಧನೆಗಳಲ್ಲೇ ಅತ್ಯಂತ ಪರಿಣಾಮಕಾರಿಯಾದದ್ದು. ಇಂದಿರಾ ಗಾಂಧಿ ಹಾಗೂ ನಿಜಲಿಂಗಪ್ಪನವರು ರಾಜಕೀಯ







ಶ್ರೀ ರಾಮಕೃಷ್ಣ ಹೆಗಡೆಯ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿಸಮರ್ಪಣೆ

ವಾಗಿ ಬೇರೆ ಬೇರೆ ಧ್ರುವಗಳಾದಾಗ, ಹೆಗಡೆಯವರು ನಿಜಲಿಂಗಪ್ಪನವರೊಂದಿಗೆ ತಾವು ನಂಬಿದ ನಂಬಿಕೆಗಳಾಗಿ ನಿಂತು ಹೋರಾಡಿದ್ದು, ತುರ್ತು ಪರಿಸ್ಥಿತಿಯ ಕಾಲದಲ್ಲಿ ಸೆರೆಮನೆವಾಸ ಅನುಭವಿಸಿದ್ದು, ನಂತರ ಜನತಾದಳದ ರಾಷ್ಟ್ರೀಯ ಕಾರ್ಯದರ್ಶಿಯಾಗಿ, ರಾಜ್ಯಸಭಾ ಸದಸ್ಯರಾಗಿ, ಕರ್ನಾಟಕ ಪ್ರಥಮ ಕಾಂಗ್ರೆಸ್ಸೇತರ ಮುಖ್ಯಮಂತ್ರಿಯಾಗಿ ಕೆಲಸ ಮಾಡಿದ್ದು ಇತ್ತೀಚಿನ ಇತಿಹಾಸ.

ನಿಜಲಿಂಗಪ್ಪನವರು, ಕಾಂಗ್ರೆಸ್ಸೇತರ ನಾಯಕರನ್ನು ಈ ನೆಲದಲ್ಲಿ ತಯಾರು ಮಾಡಿದರು. ಅದರ ಅಗ್ರಪಂಕ್ತಿಯಲ್ಲಿ ಮೊದಲಿಗರು ಹೆಗಡೆಯವರು, ರಾಮಕೃಷ್ಣ ಹೆಗಡೆ, ಎಸ್.ಆರ್. ಬೊಮ್ಮಾಯಿ, ಎಚ್.ಡಿ. ದೇವೇಗೌಡ, ಜೆ.ಎಚ್. ಪಟೇಲ್ ಅವರೆಲ್ಲ ನಾಡಿನ ಮುಖ್ಯಮಂತ್ರಿಗಳಾಗಿ ತಮ್ಮ ನಂಬಿಕೆಗಳಿಗೆ ಬದ್ಧರಾಗಿ ಹೋರಾಡಿ ನಾಡು ಕಟ್ಟಿದರು. ರಾಷ್ಟ್ರವ್ಯಾಪಿ ಬೆಳೆಸಿದರು. ಈಗ ನಿಜಲಿಂಗಪ್ಪನವರು, ಜೆ.ಎಚ್. ಪಟೇಲರು ಹಾಗೂ ಹೆಗಡೆಯವರು ನಮ್ಮ ನಡುವೆಯಿಲ್ಲ. ಉಳಿದವರಲ್ಲಿ ಸಾಮರಸ್ಯ ಇಲ್ಲ. ಮೊದಲಿನ ವಿಶ್ವಾಸ ಉಳಿದಿಲ್ಲ. ಆದರೂ ಮತ್ತೆ ಪಕ್ಷ ಕಟ್ಟಿ. ನಾಡನ್ನು ಸಮೃದ್ಧಿ, ಸ್ವಾಭಿಮಾನಿ ನಾಡನ್ನಾಗಿ ಮಾಡಬೇಕೆಂಬ ಛಲವಿದೆ. ಈ ಛಲವೇ ಮುಂದಿನ ರಾಜಕೀಯ ಇತಿಹಾಸದಲ್ಲಿ ಮಹತ್ವದ ಹಾಗೂ ಪರಿಣಾಮಕಾರಿ ತಿರುವಾಗುವುದರಲ್ಲಿ ಸಂಶಯವಿಲ್ಲ.

ಈ ಹಿರಿಯರು ಕಲೆತು, ಕನ್ನಡ ನಾಡಿನಲ್ಲಿ 'ಜನತಾದಳ'ವನ್ನು ಹುಟ್ಟುಹಾಕಿದರು. ಅದು ಒಂದು ಯಶಸ್ವೀ ಪ್ರಯೋಗವೂ ಆಯಿತು. ಆ ಪ್ರಯೋಗ ಬಹಳ ದಿನ ಉಳಿಯಲಿಲ್ಲ. ಇತಿಹಾಸ ದಿಂದ ನಾವು ಪಾಠ ಕಲಿಯಬೇಕು. ಮತ್ತು ಇತಿಹಾಸ ಮರುಕಳಿಸ ಬೇಕೆನ್ನುವುದು ಎಲ್ಲ ಪ್ರಜಾಪ್ರಭುತ್ವವಾದಿಗಳ ಹಂಬಲ.

ರಾಜಕಾರಣೆಯೆಂದರೆ ಉಪೇಕ್ಷೆಗೆ, ಲೇವಡಿಗೆ ತುತ್ತಾಗುವ ಪರಿಸ್ಥಿತಿ ಉಂಟಾಗಿದೆ. ಬದುಕಿನ ಎಲ್ಲಾ ರಂಗಗಳನ್ನು ಆವರಿಸಿರುವ ರಾಜಕಾರಣವನ್ನು ಕೇವಲ ಚುನಾವಣಾ ರಾಜಕಾರಣವನ್ನಾಗಿ ಪರಿಗಣಿಸದೆ, ದೇಶದ ಆರ್ಥಿಕ, ಸಾಮಾಜಿಕ, ರಾಜಕೀಯ ಚಿಂತನೆಗಳನ್ನು ಬದಲಿಸುವ ಅಸ್ತ್ರವೆಂದು ಪರಿಗಣಿಸಬೇಕಾಗಿದೆ. ನಾಡು ಕಟ್ಟುವ ಕ್ರಿಯೆಯೆಂದರೆ ಅದನ್ನು ಆರ್ಥಿಕವಾಗಿ ಸಬಲಗೊಳಿಸುವುದು ಹಾಗೂ ಸಾಂಸ್ಕೃತಿಕವಾಗಿ ಶ್ರೀಮಂತಗೊಳಿಸುವುದು ಆಗಿದೆ. ಈ ದಿಸೆಯಲ್ಲಿ ರಾಮಕೃಷ್ಣ ಹೆಗಡೆಯವರು ನಾಡಿಗೆ ಸಲ್ಲಿಸಿದ ಕೊಡುಗೆ ಅಪಾರ, ಅನುಪಮ ಹಾಗೂ ಅನುಕರಣೀಯ.

ಜನತಾ ಪರಿವಾರ ಒಂದುಗೂಡಬೇಕೆಂಬ ಅವರ ನಿರಂತರ ಪ್ರಯತ್ನದ ಪ್ರತಿಫಲವಾಗಿ ಜನತಾದಳ ರೂಪುಗೊಂಡಿತ್ತು. ಆಗ ನಾನು ನಮ್ಮ ರಾಜ್ಯ ಘಟಕದ ಅಧ್ಯಕ್ಷನಾಗಿ ಸಂಸ್ಥಾಪನಾ ಸಮಾವೇಶವನ್ನು ನಡೆಸಿದಾಗ ನಾನು ಇದ್ದೆ. ಇತಿಹಾಸದ ವಿಪರ್ಯಾಸವೆಂದರೆ ಅವರ ಬದುಕಿನ ಮುಸ್ಸಂಜೆಯಲ್ಲಿ ಹೋಳಾದ ಜನತಾ ದಳಗಳನ್ನು ಒಂದುಗೂಡಿಸುವ ಪ್ರಕ್ರಿಯೆಗೆ ಅವರು ಅಡ್ಡಿಯಿದ್ದರು ಎನ್ನುವ ಆಪಾದನೆ ಕೂಡ ಬಂದಿತ್ತು. ಆದರೆ ಅವರು ಒಂದು ಮಾಡುವ ನಿಟ್ಟಿನಲ್ಲಿ ಹೆಚ್ಚು ಶ್ರಮ ವಹಿಸಲು ಅವರ ಅನಾರೋಗ್ಯದ ಕಾರಣದಿಂದಾಗಿ ಸಾಧ್ಯವಾಗಿಲ್ಲ. ಆದರೆ, ಅವರು ಕಾಂಗ್ರೆಸ್ ಹಾಗೂ ಭಾರತೀಯ ಜನತಾ ಪಕ್ಷಗಳಿಂದ ಭ್ರಮನಿರಸನಗೊಂಡು ದೂರ ಸರಿದಿದ್ದು ಅಷ್ಟೇ ಸತ್ಯ. ಅದೇ ಕಾರಣಕ್ಕಾಗಿ ಕನಕಪುರ ಲೋಕಸಭಾ ಉಪ ಚುನಾವಣೆಯಲ್ಲಿ ದೇವೇಗೌಡರನ್ನು ಬೆಂಬಲಿಸಿದ್ದರು. ಬೇರೆಯವರ ಮಧ್ಯ ಪ್ರವೇಶದಿಂದ ಅನಾವಶ್ಯಕ ತಪ್ಪು ಅಭಿಪ್ರಾಯ ಉಂಟು ಮಾಡಿದ ಕಾರಣ ಒಂದಾಗುವ ಪ್ರಕ್ರಿಯೆಗೆ ಅಡೆತಡೆ ಉಂಟಾಯಿತು. ಈಗ ಅವರು ನಮ್ಮೊಂದಿಗಿಲ್ಲ. ಆದರೆ ಜನತಾ ಪರಿವಾರ ಒಂದಾಗಿ ಕಾಂಗ್ರೆಸ್ ಮತ್ತು ಭಾರತೀಯ ಜನತಾಪಕ್ಷಕ್ಕೆ ಪರ್ಯಾಯವಾಗಲಿ ಎನ್ನುವ ದೃಷ್ಟಿಯಿಂದ ನಮ್ಮ ಎಲ್ಲ ನಾಯಕರು ಕೆಲಸ ಮಾಡಿದರೆ ಅದೇ ಅವರಿಗೆ ನಾವು ಸಲ್ಲಿಸಬಹುದಾದ ಶ್ರದ್ಧಾಂಜಲಿ ಎಂದು ಭಾವಿಸುತ್ತೇನೆ.

## ಸಂತಾಪ ಸಂದೇಶ

ರಾಜ್ಯದ ಮಾಜಿ ಮುಖ್ಯಮಂತ್ರಿಗಳು, ರಾಜ್ಯಸಭಾ ಸದಸ್ಯರು, ರಾಷ್ಟ್ರೀಯ ಖ್ಯಾತಿಯ ಅತ್ಯುತ್ತಮ ರಾಜಕೀಯ ಮುತ್ಸದ್ದಿಗಳು, ಲೋಕಾನುಭವ ಸಂಮೃದ್ಧರು, ದೂರದರ್ಶಿಗಳು ರಾಜ್ಯದ ಸಮಸ್ತ ಜನತೆಯ ಹೃನ್ಮಂದಿರದಲ್ಲಿ ಆದರ್ಶನಾಯಕರೂ ಎಂದು ಪ್ರಖ್ಯಾತಿಗಳಿಸಿದ್ದ ಸನ್ಮಾನ್ಯ ಶ್ರೀ ರಾಮಕೃಷ್ಣ ಹೆಗಡೆಯವರು ದಿವಂಗತರಾದುದನ್ನು ಕೇಳಿ ಅತೀವ ದುಃಖವಾಯಿತು. ಶ್ರೀಯುತರು ರಾಜ್ಯ ಮುಖ್ಯಮಂತ್ರಿಗಳಾಗಿದ್ದ ಸೇವಾ ಅವಧಿ ಉತ್ತಮವೆನಿಸಿದ್ದಲ್ಲದೆ ಆರ್ಥಿಕ ಬದ್ಧತೆಯನ್ನು ತಂದುಕೊಟ್ಟಿದ್ದುದನ್ನು ರಾಜ್ಯದ ಜನತೆ ಮರೆತಿಲ್ಲ. ಕರ್ನಾಟಕದ ರಾಜಕಾರಣದಲ್ಲಿ ಅಶ್ವತ್ಥವೃಕ್ಷದಂತಿದ್ದ ಶ್ರೀಯುತರ ಅಗಲಿಕೆಯಿಂದ ರಾಜ್ಯಕ್ಕೆ ತುಂಬಲಾರದ ನಷ್ಟವುಂಟಾಗಿದೆ. ಆದರ್ಶ ನಾಯಕನನ್ನು ಕಳೆದುಕೊಂಡು ಬಡವಾಗಿದೆ.

ಶ್ರೀಮಠದೊಂದಿಗೆ ಮಧುರ ಬಾಂಧ್ಯವ್ಯವನ್ನು ಬೆಳೆಸಿಕೊಂಡು ಬಂದಿದ್ದ ಶ್ರೀಯುತರು ಸಂಸ್ಥೆಯ ಸಂಕಷ್ಟ ಸಮಯದಲ್ಲಿ ಶ್ರೀರಕ್ಷೆಯಾಗಿ ನಿಂತಿದ್ದನ್ನು ಸ್ಮರಿಸುತ್ತೇವೆ. ಸರಳ ಸಜ್ಜನಿಕೆಗೆ, ರಾಜಕೀಯ ಚಾಣಕ್ಷತೆಗೆ, ಅದಕೂ ಮಿಗಿಲಾಗಿ ಸಮಸ್ಯೆಗಳನ್ನು ಲೀಲಾಜಾಲವಾಗಿ ಪರಿಹರಿಸುವುದಕ್ಕೆ ಮತ್ತೊಂದು ಹೆಸರಾಗಿದ್ದ ಶ್ರೀಯುತರು ಅನೇಕ ಪಕ್ಷಗಳಲ್ಲಿದ್ದುಕೊಂಡು ರಾಜ್ಯ ಮತ್ತು ರಾಷ್ಟ್ರಕ್ಕೆ ಸಲ್ಲಿಸಿದ ಸೇವೆ ಅವಿಸ್ಮರಣೀಯವಾದುದು. ಶ್ರೀಯುತ ಹೆಗಡೆಯವರು ಕರ್ನಾಟಕದ ಇತಿಹಾಸದಲ್ಲೇ ಮರೆಯಲಾಗದ ನಕ್ಷತ್ರವಾಗಿ ಹೋಗಿದ್ದಾರೆ.

ಶ್ರೀಯುತರನ್ನು ಅಗಲಿರುವ ಅವರ ಕುಟುಂಬದವರಿಗೆ ಅಭಿಮಾನಿಗಳಿಗೆ, ಬಂಧುಬಾಂಧವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ದಯಾಮಯನಾದ ಪರಶಿವನು ಅನುಗ್ರಹಿಸಲೆಂದು ಆಶಿಸುತ್ತಾ ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಹಾರೈಸುತ್ತೇವೆ.

(ಶ್ರೀ ಶಿವಕುಮಾರ ಸ್ವಾಮಿಗಳು)
ಮಠಾಧ್ಯಕ್ಷರು
ಶ್ರೀ ಸಿದ್ಧಗಂಗಾ ಮಠ

## ಶ್ರದ್ಧಾಂಜಲಿ ಕಾರ್ಯಕ್ರಮ

### ಹೆಗಡೆಯವರ ಆದರ್ಶ ಇಂದಿಗೂ ಜೀವಂತ

– ಪರಮಪೂಜ್ಯ ಶ್ರೀ ಶ್ರೀಗಳವರು

ದಿಟ್ಟ ಹೋರಾಟಗಾರ, ರಾಷ್ಟ್ರಪ್ರೇಮಿ ಹಾಗೂ ಮಾಜಿ ಮುಖ್ಯಮಂತ್ರಿ ದಿ. ರಾಮಕೃಷ್ಣ ಹೆಗಡೆಯವರ ಆದರ್ಶ ಇಂದಿಗೂ ಜೀವಂತವಾಗಿದ್ದು, ಅದನ್ನು ಉಳಿಸಿ-ಬೆಳೆಸುವ ಅನಿವಾರ್ಯತೆ ಇದೆ ಎಂದು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹೇಳಿದರು.

ಅವರು ಫೆಬ್ರವರಿ ೭ರಂದು ತುಮಕೂರಿನ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು ಆವರಣದಲ್ಲಿ ಕರ್ನಾಟಕ ರಾಜ್ಯ ಶಿಕ್ಷಕರ ಹಾಗೂ ನೌಕರರ ಒಕ್ಕೂಟ (ರಿ) ತುಮಕೂರು ಶಾಖೆ ವತಿಯಿಂದ ಏರ್ಪಡಿಸಿದ್ದ 'ರಾಮಕೃಷ್ಣ ಹೆಗಡೆ ಒಂದು ಸ್ಮರಣೆ' ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು.

ಒಳ್ಳೆಯ ಅನುಭವಿ ರಾಜಕಾರಣಿಯಾಗಿದ್ದ ಹೆಗಡೆಯವರು ಚಿಂತನಶೀಲವುಳ್ಳ ವರಾಗಿದ್ದು, ಜನಸಾಮಾನ್ಯರ ಸಮಸ್ಯೆಗಳಿಗೆ ತಕ್ಷಣ ಸ್ಪಂದಿಸುತ್ತಿದ್ದರು. ಎಂತಹ ಕ್ಲಿಷ್ಟಕರ ಪರಿಸ್ಥಿತಿಯಲ್ಲೂ ಯೋಚಿಸಿ, ನಿರ್ಧಾರ ಕೈಗೊಳ್ಳುತ್ತಿದ್ದರು. ಇವರ ಆಡಳಿತದ ಕಾಲದಲ್ಲಿ ಹೊಸ ಹೊಸ ಯೋಜನೆಗಳು ಜಾರಿಗೆ ಬಂದವು ಎಂದರು. ಪಕ್ಷಪಾತವಿಲ್ಲದೆ ಎಲ್ಲರವನ್ನು ಸಮಾನವಾಗಿ ಕಾಣುತ್ತಿದ್ದ ಹೆಗಡೆಯವರ ನಡವಳಿಕೆ ಎಲ್ಲರೂ ಮೆಚ್ಚುವಂತಹದ್ದು, ರಾಜ್ಯದಲ್ಲಲ್ಲದೆ ರಾಷ್ಟ್ರಮಟ್ಟದಲ್ಲೂ ಅವರ ಅಮೋಘ ಸೇವೆ ಅನನ್ಯವಾದುದು ಎಂದು ಶ್ರೀಗಳು ಶ್ಲಾಘಿಸಿದರು.







ತುಮಕೂರಿನಲ್ಲಿ ಫೆಬ್ರುವರಿ ೭ರಂದು ನಡೆದ ರಾಮಕೃಷ್ಣ ಹೆಗಡೆ ಒಂದು ಸ್ಮರಣೆ ಕಾರ್ಯಕ್ರಮವನ್ನು ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ರಾಮಕೃಷ್ಣ ಹೆಗಡೆಯವರ ಮಗ ಶ್ರೀ ಭರತ್ ಹೆಗಡೆ, ಪತ್ನಿ ಶ್ರೀಮತಿ ಶಕುಂತಲಾ ಹೆಗಡೆ, ವಿಧಾನ ಪರಿಷತ್ ಸದಸ್ಯ ಶ್ರೀ ಎಸ್. ಚನ್ನಬಸವಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಭಾಗ್ಯ ಪಡೆದ ಶ್ರೀ ರಾಮಕೃಷ್ಣಹೆಗಡೆಯವರ ಕುಟುಂಬ ವರ್ಗದವರು ಮತ್ತು ವಿಧಾನ ಪರಿಷತ್ ಸದಸ್ಯ ಶ್ರೀ ಎಸ್. ಚನ್ನಬಸವಯ್ಯ ಅವರು

ಆಹ್ವಾನಿತರಾಗಿದ್ದ ಡಾ. ಸಮತೀಂದ್ರ ನಾಡಿಗ್‌ರವರು ಮಾತನಾಡುತ್ತಾ ಹೆಗಡೆಯವರು ಒಬ್ಬ ಸಾಮಾನ್ಯ ಮನುಷ್ಯನಲ್ಲಿನ ವ್ಯಕ್ತಿತ್ವವನ್ನು ಗುರುತಿಸುತ್ತಿದ್ದರು. ಆತನ ಸಮಸ್ಯೆ ಕಷ್ಟ-ಕಾರ್ಪಣ್ಯ ಗಳನ್ನು ಪರಿಹರಿಸುತ್ತಿದ್ದರು. ಹೆಗಡೆಯವರೂ ಇಲ್ಲಿ ಇಲ್ಲದೆ ಇದ್ದರೂ ಅವರ ಮುಗುಳ್ನಗೆ ಈ ಸಭೆಯಲ್ಲಿ ಇದೆ ಎಂದು ಅವರ ನುಡಿದರು.

ನ್ಯಾಯಾಂಗ, ಶಾಸಕಾಂಗ ಹಾಗೂ ಕಾರ್ಯಾಂಗಗಳಲ್ಲಿ ಲೋಪದೋಷಗಳನ್ನು ಗುರುತಿಸಿ ಸರಿಪಡಿಸುತ್ತಿದ್ದ ಹೆಗಡೆಯವರು ಕೆಲವು ಬದಲಾವಣೆಗೆ ಶ್ರಮಿಸುತ್ತಿದ್ದರು ಎಂದು ನಾಡಿಗರ್‌ರವರು ಹಲವು ಉದಾಹರಣೆ ಸಹಿತ ಗುಣಗಾನ ಮಾಡಿದರು.

ಹೆಗಡೆ ನಾಡಿನ ಜನತೆಯ ಪ್ರೀತಿಯ ಮುಖ್ಯಮಂತ್ರಿಯಾಗಿ ಸೇವೆ ಸಲ್ಲಿಸಿದ್ದರು. ಅವರ ತತ್ವ, ನೀತಿಗಳು ಇಂದಿಗೂ ಬೇಕೆನಿಸಿವೆ. ಅವರ ಎಷ್ಟೋ ವಿಷಯಗಳು ರಾಷ್ಟ್ರಮಟ್ಟದಲ್ಲಿ ಚರ್ಚೆಗಳಾಗಿವೆ. ಅವರು ಕರ್ನಾಟಕದಲ್ಲಿ ಬಹುಮಂದಿ ಅನುಭವಿ ರಾಜಕಾರಣಿಗಳನ್ನು ಹುಟ್ಟು ಹಾಕಿದ್ದಾರೆ ಎಂದು ವಿಧಾನ ಪರಿಷತ್ ಸದಸ್ಯ ಎಂ.ಪಿ. ನಾಡಗೌಡರು ಹೇಳಿದರು.

ದಿ. ಹೆಗಡೆ ಅವರ ಪುತ್ರ ಭರತ್ ಹೆಗಡೆಯವರು, 'ನಿಮ್ಮೆಲ್ಲರ ಪ್ರೀತಿ-ವಿಶ್ವಾಸ ಸದಾಕಾಲ ನಮ್ಮ ಮೇಲೆ ಇರಲಿ'. ನಮ್ಮ ತಂದೆಯ ಮಾರ್ಗದರ್ಶನದಲ್ಲಿ ನಾವೆಲ್ಲ ಮುನ್ನಡೆಯೋಣ, ಅವರ ಆದರ್ಶ ಕಾಪಾಡೋಣ ಎಂದು ತಿಳಿಸಿದರು.

ಪ್ರಾಸ್ತಾವಿಕ ಭಾಷಣ ಮಾಡಿದ ವಿಧಾನ ಪರಿಷತ್ ಸದಸ್ಯ ಎಸ್. ಚನ್ನಬಸವಯ್ಯನವರು ಹೆಗಡೆಯವರು ರಾಷ್ಟ್ರೀಯ ವೇತನವನ್ನು ಹಾಗೂ ಶೈಕ್ಷಣಿಕ ನೀತಿಯನ್ನು ಜಾರಿಗೆ ತಂದವರು. ಅವರ ಸೇವೆ ಪ್ರಶಂಸನೀಯವಾದದ್ದು. ಅವರ ಅನುಯಾಯಿಗಳಾದ ನಾವು ತತ್ವ ಸಿದ್ಧಾಂತಗಳಿಗೆ ಬದ್ಧರಾಗಿರುತ್ತೇವೆ ಎಂದು ಹೇಳಿದರು.

ದಿ. ಹೆಗಡೆ ಧರ್ಮಪತ್ನಿ ಶ್ರೀಮತಿ ಶಕುಂತಲ ಹೆಗಡೆ, ಪುತ್ರಿ ಶ್ರೀಮತಿ ಮಮತಾ ಶ್ರೀ ನಿಚ್ಚಾನಿ, ಅಳಿಯ ನಿಚ್ಚಾನಿ ವೇದಿಕೆಯಲ್ಲಿದ್ದರು.

ಕುಮಾರಿ ಪೂಜ್ಯ ಮೋಹನ್ ಪ್ರಾರ್ಥಿಸಿ, ಕೆ.ಬಿ. ಜಯಣ್ಣ ಸ್ವಾಗತಿಸಿ, ಪ್ರಾಚಾರ್ಯ ಜಿ.ಎಸ್. ರೇಣುಕಪ್ಪ ವಂದಿಸಿದರು. ಉಮಾ ಮಹೇಶ್ ಕಾರ್ಯಕ್ರಮ ನಿರೂಪಿಸಿದರು.

★

# ಜನಪದ ಸಾಹಿತ್ಯದಲ್ಲಿ ಶರಣರ ಚಿಂತನೆ

– ಡಾ. ದೇವೇಂದ್ರಕುಮಾರ ಹಕಾರಿ
ವಿಶ್ರಾಂತ ಪ್ರಾಧ್ಯಾಪಕರು,
ಧಾರವಾಡ.

ಜನಪದ ಸಾಹಿತ್ಯ ಎನ್ನುವುದು ತುಂಬ ವ್ಯಾಪಕ ಪ್ರಪಂಚ. ಹಾಡುಗಳದ್ದೇ ಒಂದು ಅಪರಿಮಿತ ಲೋಕ. ಕುಟ್ಟು-ಬೀಸುವ ಹಾಡು, ಗಾದೆ, ಒಗಟು, ಜನಪದ ರಂಗಭೂಮಿಯ ಬಯಲಾಟ, ಸಣ್ಣಾಟ, ದೊಡ್ಡಾಟದ ಹಾಡು, ಯಕ್ಷಗಾನದ ಹಾಡು (ಡಪ್ಪಿನಾಟದ ಹಾಡು), ಯಾತದ ಹಾಡು, ನಾಟಿ ಹಾಡು, ತೆನಿ ಮುರಿಯುವಾಗಿನ ಹಾಡು, ಕಣದಲ್ಲಿ ಬೆಳ್ಳಬೆಳತನ ಹಾಡುವ ಹಂತೀಹಾಡು, ಕೌಟುಂಬಿಕ ಜೀವನದ ವಿವಿಧ ಸಂದರ್ಭದಲ್ಲಿ ಹಾಡುವ ಸಂಪ್ರದಾಯದ ಹಾಡು, ಬೀಗರನ್ನು ಎದುರುಗೊಳ್ಳುವ ಹಾಡು, ಐರಾಣದ ಹಾಡು, ಚಾಜದ ಹಾಡು, ಸೀಮಂತದ ಹಾಡು, ಸೋಬಾನೆ ಹಾಡು, ಜೋಗುಳ ಹಾಡು, ಗೌರಿ-ಸೀಗಿ ಹುಣ್ಣಿಮೆಗಳಲ್ಲಿ ಚರಗ ಚೆಲ್ಲುವ ಹಾಡು, ಜೋಕುಮಾರನ ಹಾಡು – ಇಂಥ ಬಿಡಿ ಬಿಡಿ ಹಾಡು ಮೊದಲುಗೊಂಡು ಸುದೀರ್ಘ ಹಾಡು, ಕಥನ ಲಾವಣಿಗಳವರೆಗೆ ಈ ಹಾಡುಗಳ ಹರವು. ನಾಡಿನ ವರಕವಿ 'ಅಂಬಿಕಾತನಯದತ್ತ' ಅವರು ಗರತಿ ಹಾಡು ಪರಿಚಯಿಸುತ್ತ ಪ್ರಸಾದವು ಈ ಹಾಡುಗಳ ಹುಟ್ಟುಗುಣವಾಗಿದೆ' (ದ.ರಾ. ಬೇಂದ್ರೆ, ಗರತಿಯ ಹಾಡು, ಪು.೧೬) ಎಂದಿದ್ದಾರೆ. ಇಲ್ಲಿ ಪ್ರಸಾದಗುಣ ಎಂದರೆ ಮತ್ತೊಬ್ಬ ವ್ಯಕ್ತಿಯ ವ್ಯಾಖ್ಯೆಯಿಲ್ಲದೆ ನೇರವಾಗಿ ಸಂಹವನಗೊಳ್ಳುವುದು ಎಂದು ತಾತ್ಪರ್ಯ. ಇದು ಜನಪದ ಹಾಡುಗಳ ವೈಶಿಷ್ಟ್ಯ. ಈ ಹಾಡುಗಳ ವಸ್ತು ಬದುಕಿನ ಅನಿಸಿಕೆ, ಸುಖ-ದುಃಖ, ಕೋಪ-ತಾಪ, ಶೌರ್ಯ-ಸಾಹಸ, ಪ್ರೇಮ-ಕಾಮ, ಪ್ರಣಯ-ವಿರಹ, ಹಾಸ್ಯ-ವಿಡಂಬನೆ, ಒಲವು-ಚೆಲವು, ನೆಲ-ಮುಗಿಲು, ಮಳೆ-ಗಾಳಿ, ಗಿಡ-ಗಂಟಿ, ಸಸ್ಯ-ಮರ, ಎತ್ತು-ಎಮ್ಮೆ, ದನ-ಕರು, ಬಂಧು-ಬಾಂಧವರು, ಚರಿತ್ರೆ-ಇತಿಹಾಸ, ರಾಮಾಯಣ-ಮಹಾಭಾರತ, ಪುರಾಣ- ಶಿವಶರಣರ ಜೀವನ ಕಥನ – ಹೀಗೆ ನೂರಾರು ಮಟ್ಟು-ಧಾಟಿಗಳ-ಲಯಗಳ, ಸಾವಿರಾರು ಹಾಡುಗಳು.

*ಜನಕರಾಯನ ಮಗಳು ಬನಕ ತೊಟ್ಟಿಲ ಕಟ್ಟಿ*
*ಲವಕುಶರನಿಟ್ಟು ತೂಗ್ಯಾಳೋ / ಆ ತಾಯಿ*
*ನಗುನಗುತ ವನವಾಸ ನೀಗ್ಯಾಳೋ*

ಈ ಹಾಡುಗಳ ವಸ್ತು ವಿಸ್ತಾರಗಳ ಬಗ್ಗೆ ಆಚಾರ್ಯ ಬಿ.ಎಂ.ಶ್ರೀ ಹೇಳುವ ಮಾತು ಮನನೀಯವಾಗಿದೆ : 'ಈ ಹಾಡು ಒಂದೊಂದು ಬಿಡಿ ಪದ್ಯವಾಗಿ ಯಾವುದಾದರೂ ಒಂದು ಭಾವವನ್ನೋ, ಸನ್ನಿವೇಶವನ್ನೋ ತಿಳಿಸುವುದೇ ಹೆಚ್ಚು'.

ಹೀಗಾಗಿ ಇತಿಹಾಸದ ಕಿತ್ತೂರು ರಾಣಿ ಚೆನ್ನಮ್ಮನಿಂದ ಹಿಡಿದು ಶರಣರವರೆಗೆ, ಪುರಾಣದ ಮಾದೇಶ್ವರನಿಂದ ಹಿಡಿದು ಬೀರದೇವರವರೆಗೆ ಈ ಕಥಾನಕಗಳು ಹರಡಿವೆ. ಪ್ರಸ್ತುತ ವಿವೇಚನೆಗೆ ತ್ರಿಪದಿ ಕಥನಗೀತೆಗಳ ಮಿತಿ ಹಾಕಿಕೊಳ್ಳಲಾಗಿದೆ.

ಜನಪದರ ಬದುಕಿನ ಒಂದು ವೈಶಿಷ್ಟ್ಯವೆಂದರೆ ಅವರ ಜೀವನದ ಮೇಲೆ ಪ್ರಭಾವ ಬೀರಿದ ವ್ಯಕ್ತಿ-ಶಕ್ತಿಗಳನ್ನು ಕುರಿತು ಸದಾ ಹಾಡುತ್ತಿರುವುದು. ಅವರ ಹಾಡು ಅಂದರೆ ಅವರಿಗೆ ಮೆಚ್ಚುಗೆ, ಒಂದು ರೀತಿಯಲ್ಲಿ ಸ್ತುತಿಗೀತೆ! ಜನಪದರು ಆ ರೀತಿ ಹಾಡುತ್ತ ಬಂದ ಕಾರಣ ಅವರ ಜೀವನದಲ್ಲಿ ಇಂದಿಗೂ ಜೀವನದ ಆದರ್ಶಗಳು ಜೀವಂತವಾಗಿವೆ.

ಅತ್ಯಂತ ಕಠಿಣ ಪ್ರಸಂಗಗಳು ಜೀವನದಲ್ಲಿ ಬಂದರೂ ಧೈರ್ಯದಿಂದ ಎದುರಿಸಬೇಕು ಎನ್ನುವ ನೈತಿಕ ಬೆಂಬಲದ ಮಾತು, ಜೊತೆಗೆ ಇಂಥ ಮಹಾನ್ ವ್ಯಕ್ತಿಗಳಿಗೆ ಈ ರೀತಿ ಕಷ್ಟಗಳು ಬಂದಾಗ ನಮ್ಮಂಥ ಜನಸಾಮಾನ್ಯರು ಎದೆಗುಂದಕೂಡದು ಎನ್ನುವ ಸಾಂತ್ವನ; ಅದಕ್ಕಿಂತ ಹೆಚ್ಚಾಗಿ ತಮಗೆ ಬಹು ಮೆಚ್ಚುಗೆಯಾದ ಜೀವನಮೌಲ್ಯಗಳನ್ನು ತಮಗೆ ತಿಳಿದ ಪುರಾಣ ಪುಣ್ಯಕಥೆಗಳ ಉದಾಹರಣೆಗಳ ಮೂಲಕ ಎತ್ತಿಹೇಳುವ ತವಕ ಇಲ್ಲಿ ಕಂಡುಬರುತ್ತದೆ. ಅಂದರೆ ಜೀವನದ ಉನ್ನತಾದರ್ಶಗಳು ಸದಾ ಜನರ ಬಾಯಲ್ಲಿರಬೇಕು; ಅದರಿಂದ ಜನ ಪ್ರೇರಣೆಗೊಂಡು ತಾವೂ ಸ್ಪಂದಿಸಬೇಕು. ಜೀವನದ ಆದರ್ಶಗಳ ಆರಾಧನೆ ನಿರಂತರ ನಡೆಯಬೇಕು ಎನ್ನುವುದು ಜನಪದರ ಹಂಬಲ. ಮೆಚ್ಚುಗೆಗಿಂತ ಇಲ್ಲಿ ಪೂಜಾ ಮನೋಭಾವ ಎದ್ದುಕಾಣುವಂಥದು.

ಒಂದು ಕಾಲಕ್ಕೆ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಪುರಾಣ, ಪ್ರವಚನ ಮುಂತಾದವು ಯಾವಾಗಲೂ ನಡೆಯುತ್ತಿದ್ದವು ಎನ್ನುವುದನ್ನು ಸ್ಮರಿಸಿಕೊಳ್ಳಬೇಕು. ಸು. ೧೯೫೬-೧೯೬೦ರ ದಶಕದಲ್ಲಿ ಡಾ. ಗದ್ದಿಗಿಮಠ ಅವರು ಇಂಥ ಸಂಗ್ರಹ ಕಾರ್ಯವನ್ನು ಅಂದು ಮಾಡದೇ ಹೋಗಿದ್ದರೆ ನಮ್ಮ ಪಾಲಿಗೆ ಅಘಾತಕರವಾದ ನಷ್ಟವಾಗುತ್ತಿತ್ತು.

ನಮ್ಮ ಜನಪದರು – ವಿಶೇಷತಃ ಮಹಿಳೆಯರು – ಸಂಜೆ ಯಾವುದಾದರೊಂದು ತಮ್ಮ ಮೆಚ್ಚುಗೆಯ ಕಥಾನಕವನ್ನು ಹಾಡಲು ಆರಂಭಿಸಿದರೆ ಅವರ ಆ ಹಾಡು ಮುಗಿಯುವ ಹೊತ್ತಿಗೆ ಸೂರ್ಯೋದಯವಾಗುತ್ತಿತ್ತು. ಸಿರಿಯಜ್ಜಿ, ತಿಕೋಟಾ ಗೌರವ್ವ ಗುಡಿಸಾಗರ ಫಕೀರವ್ವ, ಎಲಿಸಮ್ಮ, ಹಾಲಕ್ಕಿ ಒಕ್ಕಲಿಗರ ಸುಕ್ರಿ ಇತ್ಯಾದಿ ಮಹಿಳೆಯರನ್ನು ಈ ನಿಟ್ಟಿನಲ್ಲಿ ಉದಾಹರಿಸಬಹುದು.

ಏನಿದ್ದರೂ ಶರಣರು ಕೈಕೊಂಡ ಸಾಮಾಜಿಕ ಪುನರುಜ್ಜೀವನ, ಪರಿವರ್ತನೆ ಸಾಕಾರವಾದ ೧೨ನೆಯ ಶತಮಾನದ ವಚನ ಚಳವಳಿ ಅಥವಾ ಸಾಮಾಜಿಕ ಕ್ರಾಂತಿ, ಶ್ರೇಣಿಕೃತ ಸಮಾಜದ ಎಲ್ಲ ವರ್ಗದ ಜನ ಎಚ್ಚತ್ತು ಕಾಯಕ ತತ್ತ್ವಾಧಾರಿತ ಸ್ವಾವಲಂಬಿ ಸಮಾಜ ನಿರ್ಮಾಣದ ಆಂದೋಲನದಲ್ಲಿ ಭಾಗಿಗಳಾಗಿದ್ದು ಆ ಶತಮಾನದ ಅಮೋಘ ಕಾರ್ಯ. ಇಂಥವೇ ಕಾರಣಗಳಿಂದಾಗಿ ಆ ಕಾಲದ ಕ್ರಾಂತಿಯ ಬಿಸಿ ಸಕಲರನ್ನು ತಲುಪಲು ಯತ್ನಿಸಿದ್ದು ಒಂದು ಅಪೂರ್ವ ದಾಖಲೆ. ಆದರೆ ಆ ಕ್ರಾಂತಿಯ ದೂರದೃಷ್ಟಿ ಅಂದಿನ ಶ್ರೇಣಿಕೃತ ಜನಸಮುದಾಯಗಳ ಸಮಕಾಲೀನ ಸಾಮಾಜಿಕ ಸ್ಥಿತಿಗತಿಗಳಿಗಿಂತ ಎಷ್ಟೋ ಮುಂದಿದ್ದರಿಂದ ಅದು ವಾಸ್ತವವಾಗಿ ಶಿಷ್ಟಸಾಹಿತ್ಯದ ವಚನರೂಪದಲ್ಲಿ ಮತ್ತು ಜನಪದಸಾಹಿತ್ಯದಲ್ಲಿ ಹಾಡುಗಳ ರೂಪದಲ್ಲಿ ಉಳಿಯಿತೆಂದು ತೋರುತ್ತದೆ. ವಚನ ಸಾಹಿತ್ಯದ ಅಧ್ಯಯನ ವ್ಯಾಪಕವಾಗಿ ನಡೆದಿರುವುದು ಎಲ್ಲರಿಗೂ ತಿಳಿದ ಸಂಗತಿ. ಆದರೆ ಜನಪದ





ಸಾಹಿತ್ಯದಲ್ಲಿ ನಡೆದಿರುವ ಶರಣಚಿಂತನೆ ಅಷ್ಟೊಂದು ಚರ್ಚಿತವಾದಂತೆ ತೋರುತ್ತಿಲ್ಲ.

ಹನ್ನೆರಡನೆಯ ಶತಮಾನದ ಶರಣರ ಪ್ರಭಾವದಿಂದಾಗಿ ಆ ಶರಣರ ಸಮಾನತೆ, ಮತ್ತು ಕಾಯಕತತ್ತ್ವಗಳು ಸಾಮಾಜಿಕ ನೆಲೆಯಲ್ಲಿ ಗಾಢವಾದ ಪ್ರಭಾವ ಬೀರಿದ್ದು, ಅದಕ್ಕೂ ಮೊದಲೇ ಜಾತಿ ಮತ ಪಂಥಗಳ ಭೇದಭಾವ ಮರೆತು ಕೃಷಿ ಕಾಯಕಮಾಡುತ್ತಿದ್ದ ನಮ್ಮ ಗ್ರಾಮೀಣ ಭಾಗದ ಜನಪದರಿಗೆ ತುಂಬ ಅಪ್ಯಾಯಮಾನವಾಗಿ ಕಂಡಿತು. ಒಕ್ಕಲುತನ ಮತ್ತು ಅದನ್ನು ಅವಲಂಬಿಸಿ ಅದರ ಸುತ್ತು ಮುತ್ತಲೂ ರೂಪುಗೊಂಡ ವಿವಿಧ ಆಯಗಾರ ಸಮುದಾಯಗಳನ್ನು ಈ ಚಳವಳಿ ತಟ್ಟಿರುವ ಪರಿಣಾಮವಾಗಿ ಉತ್ತರ ಕರ್ನಾಟಕದ ಕೆಲ ಭಾಗದ ಹಂತಿಯ ಹಾಡುಗಳಲ್ಲಿ ಅನೇಕ ಶರಣರ ಉಲ್ಲೇಖ, ವರ್ಣನೆ, ಕಥಾನಕ ಕಂಡುಬರುತ್ತವೆ. ದುಡಿಮೆ ಕಾಯಕಗಳೇ ತಮ್ಮ ಜೀವನ ಮಂತ್ರ ಎಂದು ಗಾಢವಾಗಿ ನಂಬಿದ್ದ ಈ ಜನಪದ ಸಮುದಾಯಗಳು ಶರಣರ ಜೀವನ ಬೋಧನೆಗಳನ್ನು ಬಹುವಾಗಿ ಮೆಚ್ಚಿಕೊಂಡದ್ದರಲ್ಲಿ ಅಚ್ಚರಿಯಿಲ್ಲ. ಆದರೆ ಒಕ್ಕಲುತನವೇ ಪ್ರಧಾನ ಜೀವನೋಪಾಯವಾದ ನಮ್ಮ ದೇಶದಲ್ಲಿ ಸಾಮಾನ್ಯವಾಗಿ ಜನಪದರಿಗೆ ಬಸವಣ್ಣ ಸಂವಹನಗೊಂಡದ್ದು ವಿವಿಧ ರೂಪಗಳಲ್ಲಿ.

ಅ. ವೃಷಭನ ಪ್ರಸಾದದ ಪ್ರತೀಕವಾದ ಬಸವಣ್ಣ ಒಕ್ಕಲುತನದ ಬದುಕಿಗೆ ಪ್ರಾಣಸ್ವರೂಪವಾದ ಬಸವ ಅಥವಾ ನಂದಿ. ಕಾರಣ, ಬಸವನೇ ಬಸವಣ್ಣ.

ಆ. ಭಕ್ತಿ ಭಂಡಾರಿಯಾಗಿದ್ದ ಬಸವಣ್ಣ ಯಾವುದೇ ಜಾತಿ ಮತಗಳನ್ನು ಒಪ್ಪಿಕೊಳ್ಳುತ್ತಿಲ್ಲ; ಕೇವಲ ಪ್ರಾಣಿದಯೆ, ಕಾಯಕ, ಸಾಮಾಜಿಕ ಸಮಾನತೆ ಮತ್ತು ಪರಮಭಕ್ತಿಯನ್ನು ಸಾರಿದ; ಸಾಧಿಸಿದ. ಬಸವನೇ ಕಲ್ಯಾಣ ಬಸವಯ್ಯ.

ಹೀಗೆ ಕೃಷಿ ಕಾಯಕ ಅವಲಂಬಿಸಿದ ಪ್ರತಿಶತ ತೊಂಬತ್ತು ಜನ 'ಎತ್ತು' ಮತ್ತು 'ಬಸವ'ಗಳ ಸಮೀಕರಣ ಮಾಡಿದ್ದು. ಈ ಸಮೀಕರಣ ಮುಖ್ಯವಾಗಿ ಅನೇಕ ಜನಪದ ಹಾಡುಗಳಲ್ಲಿ ವಿಶೇಷವಾಗಿ ಹಂತಿಹಾಡುಗಳಲ್ಲಿ ಎದ್ದುಕಾಣುತ್ತದೆ. 'ಬೆಳಕು' ಯಾವ ಮನೆಯಲ್ಲಿದ್ದರೂ ಬೆಳಕೇ. ಅದೇ ರೀತಿ 'ಎತ್ತು' ಅಥವಾ 'ಬಸವ' ಯಾವ ಮನೆಯಲ್ಲಿದ್ದರೂ ಎತ್ತೇ. ಅದಕ್ಕೆ ಜಾತಿ ಮತಗಳ ಸೋಂಕಿಲ್ಲ. ಶ್ರೇಣಿಕೃತ ಸಮಾಜದ ಸಂಕೋಲೆಗಳಿಲ್ಲ. ಎಲ್ಲ ಶ್ರಮಜೀವಿಗಳಿಗೂ ಬಸವ ಬಸವನೇ. 'ಶಿವಪುರಾಣ' ಅಥವಾ 'ಬಸವಪುರಾಣ', ಕೀರ್ತನ ಇತ್ಯಾದಿಗಳ ಮೂಲಕ ಕೆಲವು ಸಂಗತಿಗಳನ್ನು ಕೇಳಿ ಕೇಳಿ ಹೃದ್ಗತ ಮಾಡಿಕೊಂಡಿರಬಹುದಾದ ಜನಪದರು ತಮತಮಗೆ ತೋಚಿದ ರೀತಿಯಲ್ಲಿ ಕಥೆ ಕಟ್ಟಿ ಹಾಡಿರುವುದುಂಟು – ವಿಶೇಷತಃ ಹಂತಿ ತಿರುಗಿಸುವಾಗ. ಹೀಗಾಗಿ ದುಡಿಯುವ ಜನ – ರೈತರು ನಂದಿ – ವೃಷಭ – ಎತ್ತು ಮತ್ತು 'ಬಸವ'ನನ್ನು ಸಮೀಕರಿಸಿ ಹಾಡುವುದರಲ್ಲಿ ಅಚ್ಚರಿಪಡಬೇಕಿಲ್ಲ. ಎತ್ತನ್ನು 'ಬಸವನ' ಜೊತೆ ಸಮೀಕರಿಸಿ ಹಾಡುವಾಗ ಅವರ ಕಲ್ಪನೆ ಗರಿಗೆದರುತ್ತದೆ.

*ಶರಣಽರ ನೆನದಾರ, ಉರಿಬಿಸಲು ದೂರಾತ*
*ಬರ ನೀಗಿ ರಾಸಿ ಸುರದೀತ ಹಂತ್ಯಾಗ*
*ನೆನಿಬೇಕ ಸುತ್ತಿ ಸುತ್ತೀಗಿ!*

ಎಂದು ಹಾಡುವ ರೈತ ಶರಣರ ಸಂಸ್ಮರಣೆಯಲ್ಲಿಯೇ ಕಾಲ ತುಂಬಿಕೊಳ್ಳುತ್ತಾನೆ. ಇಷ್ಟಿದ್ದರೂ ತನ್ನ 'ಬಸವ'ನಿಗೆ ಎತ್ತು ಎಂದರೆ ಅವನು ಒಪ್ಪುವುದಿಲ್ಲ.

*ಎತ್ತು ಎಂದೆನಬೇಡ ಎಡಚೋರಿ ಬಸವಾನ*
*ಹತ್ತು ದಿಕ್ಕೀಗಿ ಸಲವೋನ – ಬಸವಣ್ಣ*
*ಬಿತ್ತೀದ ಬೆಳವಲಕ ಬೆಳಗ್ಯಾನೋ*

ಹೀಗೆ ತನ್ನ ಕೃಷಿ ಕಾಯಕದ ಹಿರಿಮೆಯಲ್ಲಿ 'ಬಸವ'ನ ಮಹತ್ವವನ್ನು ಎತ್ತಿ ತೋರಿಸುತ್ತಾನೆ.

*ಶರಣು ಶರಣೆಂದೇವ ಹರಣ ಹಾರೋತನಕ*
*ಕರುಣೆಸಿರಿ ಶರಣ ಬಸವಣ್ಣ – ನಮ ಸುಗ್ಗಿ*
*ಹರದಾರಿ ಹುಲಸೋ ಹುಲ್ಲುಲ್ಲಿಗೋ*

ಹೀಗೆ ಶರಣ ಬಸವಣ್ಣನ ಕರುಣೆ ಕೋರುತ್ತ ತನ್ನ ಬೆಳೆ ಹುಲುಸಾಗಲಿ ಎಂದು ಪ್ರಾರ್ಥಿಸುತ್ತಾರೆ. 'ಬಸವ'ನನ್ನು ನೆನೆಯುವ ಜನಪದರು ಬಸವಣ್ಣನ ಹೆಂಡತಿ ನೀಲಮ್ಮನನ್ನೂ ಸ್ಮರಿಸಲು ಮರೆಯುವುದಿಲ್ಲ.

*ಬಸವಣ್ಣನ್ನೇಣೂತಿ ಹಸುಮಗಳು ನೀಲಮ್ಮ*
*ಎಸಳದ್ವಾಲಕ್ಕಿ ತೊಳಸೂತ / ಹರಸ್ಯಾಳೊ*
*'ಬಸವ' ನಿಮದಂಡು ಬೆಳೆಯಾಲೋ*

ಹೀಗೆ ತನ್ನ ಕಲ್ಪನಾಲಹರಿಯನ್ನು ಹರಿಬಿಡುತ್ತಾನೆ. ತನ್ನ 'ಬಸವ'ಗಳನ್ನು ನೀರಿನ ಮಡುವಿಗೆ ಕರೆದೊಯ್ದು ಮೈತೊಳೆವಾಗ ರೈತನ ಹಿಗ್ಗಿಗೆ ಇತಿಮಿತಿಯಿಲ್ಲ. ಹಿರಿಹಳ್ಳದ ದಂಡೆಯ ಮಡು; ಅಲ್ಲಿಯೇ ಬಿಚ್ಚದ ಕ್ಯಾದಗಿ ಹೊಡಿ. ಅಲ್ಲಿ ನೀರಿನ ಮಡು. ಅಲ್ಲಿಯ ನೀರಿನಲ್ಲಿ ಬಸವ ಆಡಿದರೆ ಆ ನೀರು ಹರಿದು ಹಂಪೀಹೊಳಿಯನ್ನು ಕೂಡುತ್ತವೆ ಎಂದು ಕಲ್ಪಿಸುತ್ತಾನೆ.

ಆ ಬಳಿಕ ಹರಳಯ್ಯನನ್ನೂ ಸ್ಮರಿಸುವ ರೀತಿ ಅಮೋಘವಾಗಿದೆ. ಬಹುಶಃ ಚಾರಿತ್ರಿಕ ಹರಳಯ್ಯ ತನ್ನ ತೊಡೆಯ ಚರ್ಮದಿಂದ ಬಸವಣ್ಣನಿಗಾಗಿ ತಯಾರಿಸಿದ 'ಜೋಡು' ಕಥೆ ಇದಕ್ಕೆ ಪ್ರೇರಕವಾಗಿರಲೂ ಬಹುದು.

*ಬೆಳ್ಳೀಯ ಗಿಣಿಹಗ್ಗ. ಬಂಗಾರ ಬಾಸಿಂಗ*
*ಕೊಳ್ಳಾಗ ಹುರಿಗೆಜ್ಜೆ ಇಳವ್ಯಾನ – ಹರಳಯ್ಯ*
*ಸಿಂಗಾರ ನೋಡೀ ಹಾಡ್ಯಾನೋ*

ಹೀಗೆ ಹಲವು ಹತ್ತಾರು ರೀತಿಯಲ್ಲಿ ತನ್ನ ಎತ್ತುಗಳನ್ನು ಬಸವನೆಂದೇ ಭಾವಿಸಿ, ಸಮೀಕರಿಸಿ ಹಾಡುತ್ತ ಹಾಡುತ್ತ ಅನೇಕ ಶರಣರ ಜೀವರ ಚರಿತ್ರೆಯನ್ನೇ ಸ್ಮರಿಸುತ್ತಾನೆ.

ಪ್ರಸ್ತುತ ಪ್ರಾತಿನಿಧಿಕವಾಗಿ ಮೂವರು ಶರಣರ ಕಥಾನಕಗಳನ್ನು ಮಾತ್ರ ಎತ್ತಿಕೊಳ್ಳಲಾಗಿದೆ.

೧ನೆಯ ಕಥಾನಕ : ಬಸವಣ್ಣ

*ಉತ್ತಿ ಬಿತ್ತುವ ಮಂತ್ರ, ಬಿತ್ತಿ ಬೆಳೆಯುವ ಮಂತ್ರ,*
*ಸತ್ತ ಶಿವಮಂತ್ರ ನಿನ್ನೆಸರು – ಬಸವಯ್ಯ*
*ಮರ್ತ್ಯದೊಳು ಮಂತ್ರ ಜೀವನಕೆ*

ಕೂಡಲಸಂಗಮದಿಂದ ಕಲ್ಯಾಣಕ್ಕೆ ಬಂದ ಬಸವ ಬಿಜ್ಜಳನ ಮಂತ್ರಿಯಾಗಿ ಅನುಭವಮಂಟಪದ ಸೂತ್ರ ಹಿಡಿದ. ಬಲ್ಲಿದವರೆಲ್ಲ ಕೂಡಿದರು. ಶಿವನುಡಿಯ ಕಟ್ಟಿದರು. ಲೋಕ ಕಾಯಕದ ಗೂಡಾಯಿತು. ಕಲ್ಯಾಣ ಕಳೆಗಟ್ಟಿತು. ಬಸವನ ಮಾತು ಮರೆತ ಬಿಜ್ಜಳ, ಮಧುವರಸ ಹರಳಯ್ಯರ ನಡುವೆ ಆದ ನೆಂಟಸ್ತಿಕೆಯನ್ನು ಬಣ್ಣ ಸುಣ್ಣ ಹಚ್ಚಿ ಹೇಳಿದ ಕೊಂಡಿ ಮಂಚಣ್ಣನ ಮಾತಿಗೆ ಮನಸೋತು ಶರಣರಲ್ಲಿ ವಿಷ ಬಿತ್ತಿದ. ಮನನೊಂದ ಬಸವ ಕೂಡಲಸಂಗಮಕ್ಕೆ ಬಂದು ಬಯಲಾದ.

ಬಸವನ ಚರಿತ್ರೆಯನ್ನು ಹೇಳುವ ಈ ತ್ರಿಪದಿ ಕೇಳಿ :

*ಹಡೆದವ್ವ ಮಾದವ್ವ ಪಡೆದಪ್ಪ ಮಾದರಸ*
*ಪಡೆದವ್ವ ಅಕ್ಕ ನಾಗಾಯಿ – ಬಸವನಿಗಿ*
*ಬಿಡದ ಸಲುವ್ಯಾನ ಸಂಗಯ್ಯ*

ಕಾಯಕ ತತ್ತ್ವದ ಹಿರಿಮೆ ಸಾರುವ ರೀತಿ :

*ಕಾಯಕವ ಕಲಿಸುದಕ ನಾಯಕನು ಬಸವಯ್ಯ*
*ಜೀಯ ಹೊಸಮತಕೆ ಶಿವಭಕ್ತಿ – ಸಾರುದಕೆ*
*ರಾಯ ಜೀವನದ ಹೊಸನುಡಿಗೆ*

ಶಿವನುಡಿ ಎನ್ನುವುದು ನಮ್ಮ ಜನಪದರು 'ವಚನ'ಕ್ಕೆ ಕರೆದಿರುವ ಹೆಸರೆಂದು ತೋರುತ್ತದೆ. ಶಿವಭಕ್ತಿ ಮತ್ತು ಕಾಯಕಗಳಿಗೆ ಬಸವನೇ ನಾಯಕ ಎಂದು ನಂಬಿದ ಜನ ಆತ ಕಲಿಸಿದ ದಾಸೋಹ ತತ್ತ್ವವನ್ನು ಮರೆಯುವುದಿಲ್ಲ:

*ದಾಸೋಹಿ ಬಸವಣ್ಣ ದಾಸೋಹ ಕಲಿಸಿದನು*
*ದೇಶ ದಿಕ್ಕೆಲ್ಲ ಕೇಳೀತ – ಹೊಸ ಮಾತ*
*ಮಾಸೀತ ವೇದಽಹುಸಿಯೆಂದಾ*

ಬಸವನು ಜಾತಿ ಮತ, ಮೇಲು ಕೀಳುಗಳನ್ನು ಕಿತ್ತೊಗೆಯಲು ಮಾಡಿದ ಯತ್ನಗಳನ್ನು ಜನಪದರು ಮೆಚ್ಚಿ ಸ್ತುತಿಸಿದ್ದಾರೆ.

*ಹೊಲೆಯ ಮಾದಿಗರೆಂಬ ಬಲಿಯಾತ ಕಿತ್ತೊಗೆದ*
*ಭಲಿರೆ ಬಸವಯ್ಯ ಬಸವರಸ-ನಿನ್ನುಸಿರು*
*ನೆಲಿಯಾತು ನಿತ್ಯ ಜನಪದಕ*

ಬಸವಣ್ಣ ಬಂದು ಕಲ್ಯಾಣದಲ್ಲಿ ನೆಲಸಿದ ಬಳಿಕ ಕಲ್ಯಾಣದ ಸ್ವರೂಪವೇ ಬದಲಾಯಿತಂದೆ. ಕಲ್ಯಾಣಕ್ಕೆ ಒಂದು ತೂಕ ಬಂತು.

*ಸಾಗಿ ಬಸವನು ಬಂದು ತೂಗಿದನು ಕಲ್ಯಾಣ*
*ಬಾಗಿಲಲಿ ಕಟ್ಟಿ ಅನುಭಾವ – ಮಂಟಪವ*
*ಕೂಗು ಕೇಳುತಲಿ ಜನವೆದ್ದು*

ಹೀಗೆ ಜನರು ಅನುಭವಮಂಟಪದ ಆಸರೆಯಲ್ಲಿ ನಾನಾ ಕಡೆಯಿಂದ ಬಂದು ಉತ್ಸಾಹದಿಂದ ಕೂಡಿದರು. ಶಿವನುಡಿಯ ಕೇಳಲು ಸೇರಿದರು. ಲೋಕ ಕಾಯಕದ ಬೀಡಾಯಿತು. ಜನ ಹಿಗ್ಗು ಸಡಗರದಿಂದ ಸಂಭ್ರಮಿಸಿದರು. ದಾಸೋಹ ಕಾಯಕಗಳ ಹಾಲು ಹೊಳೆ ಹರಿದಂತಾಯಿತು. ದಾಸೋಹ, ಅರ್ಪಣೆ ಎಲ್ಲೆಡೆ. ಅನುಭಾವ ಹೆಪ್ಪುಗಟ್ಟಿತು. 'ಶಿವಮಾತು' ಉಳಿದು ಬೇರೇನೂ ಕೇಳುವಂತಿಲ್ಲ. ಅಲ್ಲಮಪ್ರಭು, ಸಿದ್ಧರಾಮ, ಮಾಚಿದೇವ, ಹರಳಯ್ಯ ಎಲ್ಲ ಸೇರಿದರು. ಸಂಭ್ರಮವೋ ಸಂಭ್ರಮ.

'ಶಿವನಕ್ಕಿಂತ ಹೆಚ್ಚು ಶಿವಶರಣರೀಜಗಕೆ' ಎನ್ನುವ ಮಾತು ರೂಢಿಯಲ್ಲಿ ಬಂತು. ಮರ್ತ್ಯಲೋಕ ದೇವಲೋಕ ಬೇರೆ ಬೇರೆ ಅಲ್ಲ ಎನ್ನುವ ನಂಬಿಕೆ ಬಲಿಯಿತು.

*ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ*
*ಚೆಲ್ಲಿದನು ತಂದು ಶಿವಬೆಳಕ – ನಾಡೊಳಗ*
*ಸೊಲ್ಲೆತ್ತಿ ಜನವು ಹಾಡುವುದು*

ಈ ಹಾಡನ್ನು ಬಸವನೇ ಎದೆಯಲ್ಲಿ ಕುಂತು ಹಾಡಿಸಿದ ಎಂದು ಮುಗಿಯುವ ಈ ಸರಳ ಕಥಾನಕಕ್ಕೆ ಬೇರೆ ವ್ಯಾಖ್ಯೆಯೇ ಬೇಕಿಲ್ಲ.

### *೨ನೆಯ ಕಥೆ : ಮಾದರ ಚೆನ್ನಯ್ಯ*

ಸೂಚಕ ಪದ್ಯವೇ ಈ ಕಥಾನಕದ ತಿರುಳನ್ನು ಸಾರುತ್ತದೆ :

*ಜಾತಿಯೊಳು ಮಾದರನು ನೀತಿಯೊಳು ಶಿವಶರಣ*
*ಮಾತು ವಚನಗಳು ಚೆನ್ನಯ್ಯ – ಶಿವನುಂಡ*
*ಕೂತು ಎದೆಯೊಳಗೆ ಅಂಬಲಿಯ*

ಬಳ್ಳಿಗಾವಿಯಲ್ಲಿ ಚೆನ್ನಯ್ಯ ತೊಗಲು ಹದಮಾಡಿ ಜೋಡು, ಮಿಣಿ ತಯಾರಿಸಿ ಮಾರಿ, ಬಂದ ಆಯದಲ್ಲಿ ದಾಸೋಹ ಮಾಡುತ್ತ ಸಂತೋಷದಿಂದ ಇದ್ದ. ಅಷ್ಟರಲ್ಲಿ ರಾಜಕೀಯ ಕಾರಣಗಳಿಗಾಗಿ ಚೆನ್ನಯ್ಯ ಊರು ಬಿಟ್ಟು ನೆರೆ ಗಡಿನಾಡಿಗೇ ಮಡದಿ ಗಂಗೆಯೊಡಗೂಡಿ ಕರಿಕಾಲ ಚೋಳನ ಪ್ರದೇಶಕ್ಕೆ ಹೋಗಿ, ಕಾಂಚಿ ಸೇರಿ ಅರಸನ ಲಾಯಕ್ಕೆ ಹುಲ್ಲು ಹಾಕುವ ಕಾಯಕ ಮಾಡುತ್ತ ದಾಸೋಹ ಮುಂದುವರೆಸಿದ. ಆತನ ಕಾಯಕ ದಾಸೋಹದ ರೀತಿ ವಿಶಿಷ್ಟ

*ಉಂಬಲ್ಲಿ ಉಡುವಲ್ಲಿ ಕೊಂಬಲ್ಲಿ ಕೊಡುವಲ್ಲಿ*
*ಶಂಭುಹರನೆಂದು ಶಿವಗುಣಿಸಿ – ಮಾಡುವನು*
*ತುಂಬ ಶಿವಶರಣ ಚೆನ್ನಯ್ಯ*

ಮನ ಬುದ್ಧಿ ಚಿತ್ತದಲ್ಲಿ ಚೆನ್ನಯ್ಯ ಹಸುಗೂಸಿನಂತೆ.

*ಗಂಡ ಭಕ್ತನು ಹಣತೆ ಹೆಂಡತಿಯು ಶಿವಬತ್ತಿ*
*ಉಂಡ ಬಾಳುವೆಯು ಹಣತೆಣ್ಣೆ – ಕಾಯಕವು*
*ಕಂಡ ಶಿವಬೆಳಕು ಜಗದೊಳಗೆ*

ಅದೊಂದು ದಿನ. ಮುಕ್ಕು ಜೋಳ ಬಿಟ್ಟು ಮನೆಯಲ್ಲಿ ಏನೂ ಇಲ್ಲ. ಶಿವಧ್ಯಾನ ಮಾಡುತ್ತ ಜೋಳ ಬೀಸಿ ಅಂಬಲಿ ಮಾಡಿ ಗಂಡನಿಗೆ ಉಣಬಡಿಸಿದಳು. ಅಂದು ಧ್ಯಾನಮಗ್ನನಾದ ಚೆನ್ನಯ್ಯನ ಮೈಯಲ್ಲಿ ಶಿವನ ತೇಜ ಹರಿದಾಡಿ ಬೆರೆದಿತ್ತು. ಶರಣನ ಗುಪ್ತಭಕ್ತಿ. ಚೆನ್ನಯ್ಯನು ಉಣ್ಣುವುದಕ್ಕೆ ಮೊದಲೇ ಶಿವನು ಪ್ರತ್ಯಕ್ಷನಾಗಿ ತಾನೇ ಉಂಡನಂತೆ. ಚೆನ್ನನಿಗೆ ಆನಂದವೋ ಆನಂದ. ತನ್ನ ಜೊತೆ ಶಿವನೂ ಅಂಬಲಿ ಕುಡಿಯುತ್ತಾನೆ. ಅದು ಅಮೃತ. ಚೆನ್ನಯ್ಯನ ಗುಪ್ತಭಕ್ತಿಗೆ ಶಿವನ ಮೆಚ್ಚುಗೆಯ ಪ್ರತೀಕವಾಗಿತ್ತು ಈ ಘಟನೆ.

ಇತ್ತ ಅರಸು ಕರಿಕಾಲಚೋಳ ಸಕಲ ವಾದ್ಯಮೇಳದೊಡಗೂಡಿ ಸಂಭ್ರಮ ಸಡಗರದಿಂದ ಪಂಚಪಕ್ವಾನ್ನ ತಂದು ನೂರಾರು ಲಿಂಗಗಳಿಗೆ ಉಣಬಡಿಸಿದನಂತೆ. ತುಂಬಿದ್ದ ಎಡೆಬಟ್ಟಲು ಇದ್ದ ಹಾಗೇ ಇದ್ದುವು. ಅದನ್ನು ಕಂಡು ಜೀವ ವ್ಯರ್ಥ ಅಂದುಕೊಂಡು ಕತ್ತಿ ಹಿರಿದ ಚೋಳ ಅರಸು ತನ್ನ ಕತ್ತು ಕತ್ತರಿಸಹೋದ. ಅದನ್ನು ತಡೆದ ಶಿವ 'ಚೆನ್ನಯ್ಯನೊಡಗೂಡಿ ಉಂಡಿರುವೆ. ಅಂಬಲಿಯ ರುಚಿಯೇ ರುಚಿ. ಅಮೃತಕ್ಕಿಂತ ರುಚಿ' ಎಂದ. ಅಚ್ಚರಿಪಟ್ಟ ಅರಸು. ಆ ಭಕ್ತ ಚೆನ್ನಯ್ಯನನ್ನು ಹುಡುಕಿ ತರುವಂತೆ ಚಾರರಿಗೆ ಆಜ್ಞಾಪಿಸಿದ. ಆ ಭಕ್ತ ಊರ ಹೊರಗೆ ಕೇರಿಯಲ್ಲಿರುವುದನ್ನು ತಿಳಿಸಿದರು. ತಕ್ಷಣ ಅರಸು ಚೋಳ ತನ್ನ ಪರಿವಾರ ಸಹಿತ ಹೋಗಿ ಚೆನ್ನಯ್ಯನನ್ನು ಕಂಡಾಗ –

*ಶಿವ ಶಿವಾ ಬದುಕುವುದು ಶಿವಭಕ್ತ ನಾನೆಂದು*
*ಕವುಡ ಕಂಟಕವು ಪುರದೊಳಗೆ – ಮಾದರ*
*ಅರಸನ ಪರಿವಾರ ಕಂಡು ನಡುಗಿದ ಚೆನ್ನಯ್ಯ*

ಇದುವರೆಗೂ ತಾನು ಮಾಡಿದ್ದು ಬಡಭಕ್ತಿ, ಅದೇ ಈ ಹಗರಣಕ್ಕೆ ಕಾರಣವಾಯಿತಲ್ಲ ಎಂದು ಕಂಬಕ್ಕೆ ತಲೆಗೊಡಲು ಮುಂದಾದ. ಅದಕ್ಕೆ ಶಿವ ನಿನ್ನ ಶಿವಭಕ್ತಿ ಜಗತ್ತಿನ ಬೆಳಕಾಗಲಿ ಎಂದೇ ಹೀಗಾಯಿತು ಎಂದ.





*ಜಾತಿಯೊಳು ಮಾದರನು ನೀತಿಯೊಳು ಶಿವಶರಣ*
*ಮಾತು ವಚನಗಳು ಚೆನ್ನಯ್ಯ । ಶಿವನುಂಡ*
*ಕುಂತು ಎದೆಯೊಳಗೆ ಹಾಡಿಸಿದ*

ಭಕ್ತಿ ಎನ್ನುವುದು ಬೆಳಕು. ಅದನ್ನು ಬಚ್ಚಿಡಲು ಆಗದು. ಅದು ಜಗತ್ತನ್ನೇ ಬೆಳಗುವಂಥದು. ಇಂಥ ನೀತಿ ಈ ಕಥಾನಕದ ತಿರುಳು; ಆಶಯ.

### *೩ನೆಯ ಕಥಾನಕ : ಹರಳಯ್ಯ*

ಇದರ ಸೂಚಕ ತ್ರಿಪದಿ :

*ಶಿಶಿಕುಲದ ಹರಳಯ್ಯ ವರಶರಣ ತಾನಾದ*
*ಪರಮತವ ಜಯಿಸಿ ಹರಸಿದರು – ಹರಳನಿಗೆ*
*ಹರ ಮೆಚ್ಚಿ ಹರಸಿ ಕರೆದೊಯ್ದು*

*ಕುಲದಲ್ಲಿ ಹೊಲೆಯನವ ಹೊಂಬಿಸಿಲ ಹೊಲೆಯಿಲ್ಲ*
*ಹೊಲೆಯ ನೆಲೆ ಬಲ್ಲ ಘನ ಶರಣ – ಹರಳಯ್ಯ*
*ನೆಲಸಿ ಕಲ್ಯಾಣಪುರದೊಳಗೆ*

ಆತನ ಮಡದಿ ಕಲ್ಯಾಣಮ್ಮ (ಗಂಗಮ್ಮ) ಆಕೆ ನಿತ್ಯ ದಾಸೋಹ ನಡೆಸುವಳು. ಆದರ ಖ್ಯಾತಿ, ಅಂದೊಮ್ಮೆ ಕಲ್ಯಾಣದ ಕೇರಿಯ ಮೇಲೆ ಹಾಯ್ದು ಬರುವ ಬಸವಣ್ಣನಿಗೆ 'ಹರಳಯ್ಯ, ಶರಣು' ಎಂದುದಕ್ಕೆ ಪ್ರತಿಯಾಗಿ ಆತ ಎರಡು ಸಲ 'ಶರಣು' ಎಂದ. ಇದನ್ನು ಮಡದಿಗೆ ತಿಳಿಸಿದ ಹರಳಯ್ಯ ಅವಳ ಸೂಚನೆಯಂತೆ ತನ್ನ ತೊಡೆ ಚರ್ಮದಿಂದ ಕೆರ ಸಿದ್ಧ ಮಾಡಿದ.

ಅವುಗಳನ್ನು ಒಳ್ಳೆ ಸಿಂಗರಿಸಿದ. ಹೊಳೆ ಹೊಳೆವ ಜರಿ ಪೋಣಿಸಿದ ಮುತ್ತು ಕುಸುರಗೆಲಸದ ರನ್ನ ಮಾಣಿಕದ ಜೋಡು. ಸೂರ್ಯಚಂದ್ರರಂತೆ ಮಿನುಗಿದವು. ಅವುಗಳನ್ನು ಒಂದು ಚೆಂದ ವಸ್ತ್ರದಲ್ಲಿ ಮುಚ್ಚಿ ಬಸವನರಮನೆಗೆ ತರುತ್ತಾನೆ. ಆ ಜೋಡಿ ಕೆರ ನೋಡಿದ ಬಸವೇಶ ಹರಳಯ್ಯನನ್ನು ಬಿಗಿದಪ್ಪಿದ. ಅದಕ್ಕೆ ಹರಳಯ್ಯನ ಆಕ್ಷೇಪಣೆ ಇತ್ಯಾದಿ.

*ಹೊಲೆಯಲಲ್ಲದೆ ಲೋಕ, ತಲೆಯಲ್ಲಿ ಹುಟ್ಟುವುದೆ*
*ಹೊಲೆಯ ಎಣಿಸಿದರೆ ಕುಲುವುಂಟೆ – ಶರಣರಿಗೆ*
*ಹೊಲೆ ಉಳಿದು ಬೇರೆ ಕುಲವುಂಟೆ !*

ಈ ಭುವನದಲ್ಲಿ 'ಶಿವಕಳೆಯ ಇಂಥ ಜೋಡುಗಳನ್ನು ಮೆಟ್ಟುವ ಸಾಮರ್ಥ್ಯ ಯಾರಿಗೂ ಇಲ್ಲ. ಶಿವನಿಗೇ ಒಪ್ಪಿಸು' ಎಂದ. ಮನೆಗೆ ಮರಳುವಾಗ ಹಾದಿಯಲ್ಲಿ ಮಧುವರಸ ಹರಳನಿಗೆ 'ಅದೇನು ಗಂಟು?' ಎಂದು ಕೇಳಿದ. 'ಬಸವಣ್ಣನಿಗಾಗಿ ಸಿದ್ಧಪಡಿಸಿದ ಜೋಡು' ಎಂದ ಹರಳಯ್ಯ. 'ಬಸವ ಬಡವ. ಅವನೇನೂ ಕೊಡಲಾರ. ತಾ ಇಲ್ಲಿ, ನಾನು ಮೆಟ್ಟುವೆ' ಎಂದು ಜುಲುಮೆಮಾಡಿದ. ಜೋರುಮಾಡಿ ಕಸಿದು ತಾನೆ ಮೆಟ್ಟಿದ. ಅಂಗಾಂಗ ಉರಿ. ಅದನ್ನು ತಾಳಲಾರದ ಮಧುವರಸ ಆತನ ತಾಯಿ ಥರಥರ ನಡುಗಿ ಪರಿಹಾರ ಕೇಳುವುದು. ಅದಕ್ಕೆ ಪರಿಹಾರ ಶಿವನಾಮ ಜಪಿಸುತ್ತ ಆರು ತಿಂಗಳ ನಿತ್ಯ ಸ್ನಾನ, ನೀರಿನ ಸ್ನಾನ. ಹರಳಯ್ಯನ ಗುಂಡಿ ಶಿವತೀರ್ಥವೆಂದು ನಂಬಿದ ಮಾದೇವಿ. ಅದರಿಂದ ಮಧುವರಸನ ಉರಿ ನೀಗಿ ಪೂರ್ಣ ಗುಣವಾಯಿತು. ವಿಷಯ ತಿಳಿದ ಮಧುವರಸ ಬೆಂದು 'ಶಿವಭಕ್ತಿ ಶಿವಪೂಜೆ ಭವತಾಪ ಕಳೆಯುವುದು' ಎಂದು ಮನಗಂಡು ತನ್ನ ಮಗಳನ್ನು ಹರಳಯ್ಯನ ಮಗನಿಗಿತ್ತು ಮದುವೆ ಮಾಡಿದ. ಇದರಿಂದ ಕೋಪಗೊಂಡ ಬಿಜ್ಜಳ, ಅವರನ್ನು ಓಲಗಕ್ಕೆ ಕರೆತರಿಸಿ ಹರಳಯ್ಯ ಮಧುವರಸರನ್ನು ಶೂಲಕ್ಕೇರಿಸಿದ.

ಜೀವ ನೀಗಿದ ಅವರು –

*ಹೂವಿನ ಮಳೆಯಾಗಿ ಹೂವಿನಾ ತೇರೇರಿ*
*ಹೂವಾದರವರು – ಶಿವಶರಣ*
*ಪಾವನದ ಮೂಲೆ ಸೇರಿದರು.*

*ಹರನ ಶಿಖರದ ಮೇಲೆ ಸಿರಿಗಂಧ ಮರಹಟ್ಟಿ*
*ಕಿರೀಟದೊಳು ಎರಡು ಗಿಣಿ ಕೂತು – ಹಾಡಿಮವು*
*ಹರಳಯ್ಯನೆಂಬ ಹಳೆಗತೆಯ*

ಹೀಗೆ ಈ ಹಂತಿಹಾಡು ಮುಗಿಯುತ್ತದೆ. ಆದರೆ ಒಕ್ಕಲಿಗನ ನಿಜವಾದ ಪಾಡು ಇಲ್ಲಿಂದ ಆರಂಭ. ತುಳಿಸಿದ ಮೇದ ತೂರಿ ರಾಸಿಮಾಡುವುದು, ಕಾಳು ಕಣಜಕ್ಕೆ ಹೇರುವುದು, ಸುಗ್ಗಿಯ ಹಿಗ್ಗಿನಿಂದ ಹಾಡುವುದು ಇತ್ಯಾದಿ.

ಇಷ್ಟಲ್ಲದೆ ಬೇರೆ ಕೆಲವು ಬಿಡಿ ಹಾಡುಗಳೂ ಶರಣರ ವಿವಿಧ ಪ್ರಸಂಗಗಳಿಗೆ ಸಂಬಂಧಿಸಿದಂತೆ ರೂಢಿಯಲ್ಲಿರುವುದು ಕಂಡುಬರುತ್ತದೆ. ಬಸವಣ್ಣನವರು ಹಡಪದ ಅಪ್ಪಣ್ಣನನ್ನು ತನ್ನ ಪತ್ನಿ ನೀಲಾಂಬಿಕೆಯನ್ನು ಕರೆತರುವಂತೆ ಕಳಿಸಿದ ಸಂದರ್ಭದ ಹಾಡೆಂದು ಹೇಳಲಾದ 'ನೋಡು ನೋಡು ನೋಡು ನೋಡು ನೋಡು ಲಿಂಗವೆ ನೋಡು ಬಸವಯ್ಯನವರು ಮಾಡಿದಾಟವ ನನ್ನನ್ನು ಅಲ್ಲಿಗೆ ಬರಹೇಳಿದರಂತೆ. ಅಲ್ಲಿರುವ ಲಿಂಗಯ್ಯ ಇಲ್ಲಿಲ್ಲವೆ' ಎನ್ನುವ ಹಾಡು, ಅಕ್ಕನಾಗಮ್ಮನ ಹಾಡೆಂದು ನಂಬಲಾದ –

*ಬಿಂದೀಗಿ ತಗೊಂಡು ನಾ ಹ್ವಾದ್ಯಾ ಹರಿವ ಜಲದೀಗ*
*ಮೀನಾಡಿ ಮಸಳ್ಯಾಡಿ-ನೀರೆಂಜಲಾಗ್ಯಾವ*
*ಹೆಂಗ ಮಾಡಲಿ ಲಿಂಗವೇ?*

ಎನ್ನುವ ಹಾಡು – ಹೀಗೆ ಇನ್ನೂ ಕೆಲವು ಸಿಗಬಹುದು. ಏನಿದ್ದರೂ ಅವೆಲ್ಲ ಶರಣರ ಹಿರಿಮೆ ಗರಿಮೆ ಕುರಿತ ಭಕ್ತಿ ಹಾಡುಗಳೇ. ಈ ದೃಷ್ಟಿಯಿಂದ 'ಶರಣಚಿಂತನ' ಎಂದರೆ ಅದರ ಬಗೆಗೆ ಜನಸಾಮಾನ್ಯರು ತಾಳಿರುವ ಭಕ್ತಿ ಗೌರವಗಳಿಂದ ಶರಣರನ್ನು ಸ್ತುತಿಸುವ, ಶರಣರ ಆದರ್ಶಗಳನ್ನು ಪೂಜ್ಯ ಭಾವನೆಯಿಂದ ಕೊಂಡಾಡುವ ಹಾಡುಗಳೆಂದೇ ಹೇಳಬೇಕು.

ಜನಪದ ರಂಗಭೂಮಿಯಲ್ಲಿ ಕೆಲವು ಕಡೆ 'ಮಾಯನಾಟ' 'ತಿರುನೀರಕಂಠ'ರನ್ನು ಕುರಿತ 'ಮುತ್ತೈದೆ ಆಟ' ಇತ್ಯಾದಿ ಸಣ್ಣಾಟಗಳು ಇಂದಿಗೂ ಗ್ರಾಮೀಣ ಜನಪದ ರಂಗಭೂಮಿಯಲ್ಲಿ ಉಸಿರಾಡುತ್ತಿವೆ.

ಆಧುನಿಕ ರಂಗಭೂಮಿಯ ಥಳಕು – ಬಳುಕಿನಲ್ಲಿ ಈ ಬಗೆಯ ಕಥಾವಸ್ತುವನ್ನು ಒಳಗೊಂಡು ಇರುವ ಅವುಗಳನ್ನು ಆಡಲು ಜನರೇ ಹಿಂಜರಿಯುತ್ತಾರೆ. ಅಲ್ಲದೆ ರೈತರಲ್ಲಿ ಹೆಣ್ಣು ಪಾತ್ರ ಧರಿಸಲು ಯಾರೂ ಮುಂದೆ ಬರುವುದಿಲ್ಲ. ವಾಸ್ತವವಾಗಿ ಆಧುನಿಕ ರಂಗಭೂಮಿಯಲ್ಲಿ ಅನೇಕ ಕಾಲೇಜು ಯುವತಿಯರೇ ತಮ್ಮ ತಮ್ಮ ತಂಡ ಕಟ್ಟಿಕೊಂಡು ರಾಜ್ಯಮಟ್ಟದ, ರಾಷ್ಟ್ರಮಟ್ಟದ ನಾಟಕ ಸ್ಪರ್ಧೆ, ಪ್ರದರ್ಶನಗಳನ್ನು ಏರ್ಪಡಿಸುವುದರಿಂದ ಮತ್ತು ಗ್ರಾಮೀಣ ಪರಿಸರದಲ್ಲಿಯೂ ಕಾಲೇಜುಗಳು ಬಂದಿರುವುದರಿಂದ ಜನಪದ ರಂಗಭೂಮಿಯಲ್ಲಿ ಯಕ್ಷಗಾನ ಹೊರತಾಗಿ ಉತ್ತರ ಕರ್ನಾಟಕದ ದೊಡ್ಡಾಟ ಸಣ್ಣಾಟಗಳತ್ತ ಯಾರೂ ಲಕ್ಷ್ಯಹರಿಸುವುದೇ ಇಲ್ಲ. ಇವೇ ಮುಂತಾದ ಕಾರಣಗಳಿಂದಾಗಿ ಶರಣ ಚಿಂತನದಿಂದ ರಂಗಭೂಮಿಯೂ ದೂರ ಸರಿದಿದೆ. 'ಮಂಟೇಸ್ವಾಮಿಯ ಕತೆ', 'ತಲೆದಂಡ' ಮುಂತಾದ ನಾಟಕಗಳು ಕೆಲವು ಸಲ ಯಶಸ್ಸು ಕಂಡರೂ ಅವು ಸಾರ್ವತ್ರಿಕ ಮನ್ನಣೆ ಪಡೆಯವಲ್ಲಿ ವಿಫಲವಾದಂತೆ ತೋರುತ್ತದೆ.

❀

ಭಾಗ-೨

# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು

ಹರದನಹಳ್ಳಿ ಐತಿಹ್ಯ, ನಿರಂಜನ ಜಂಗಮ ಪರಂಪರೆ, ಗುರು ಚನ್ನಬಸವೇಶ್ವರರಿಂದ ಸಿದ್ದಲಿಂಗೇಶ್ವರರಿಗೆ ನಿರಂಜನ ಜಂಗಮದೀಕ್ಷೆ – ಇವು ಎರಡನೆ ಸಂಧಿಯ ಮುಖ್ಯ ವಿಷಯ.

ಮೊದಲಿನಿಂದಲೂ ಕನ್ನಡನಾಡಿನ ಐಹೊಳೆ ಪಟ್ಟದ ಕಲ್ಲುಗಳಿಗೂ ದಕ್ಷಿಣದ ಪ್ರಸಿದ್ಧ ವ್ಯಾಪಾರ ಕೇಂದ್ರವಾದ ಮಧುರೆಗೂ ವ್ಯಾಪಾರ ಸಂಪರ್ಕ ವಿತ್ತು. ಅಲ್ಲಿನ ವೀರಬಣಂಜುಗಳು (ವೀರಶೈವ ವ್ಯಾಪಾರಗಾರರು) ತಮ್ಮ ಬಲಿಷ್ಠವಾದ ಎತ್ತುಗಳ ಮೇಲೆ ಅಡಕೆ ಮುಂತಾದ ಪದಾರ್ಥಗಳ ಹೇರನವನು ಹೇರಿಕೊಂಡು ಮಧುರೆಗೆ ಹೋಗುತ್ತಿದ್ದರು. ಹೀಗೆ ಹೋಗುವಾಗ ದಾರಿಮಧ್ಯೆ ಅಲ್ಲಲ್ಲಿ ಅನುಕೂಲಕರವಾದ ಸ್ಥಳಗಳಲ್ಲಿ ಬೀಡುಬಿಡುತ್ತಿದ್ದರು.

ಹೀಗೆ ಒಂದು ಸಾರಿ ಆ ಹರದರು ಕಾವೇರಿನದಿ ತೀರದಲ್ಲಿ ನೀರು ನೆರಳು ಮೇವುಗಳಿಂದ ಅನುಕೂಲಕರವಾಗಿರುವ ಸ್ಥಳದಲ್ಲಿ ವಿಶ್ರಾಂತಿಗಾಗಿ ಹೇರುಗಳನ್ನಿಳಿಸಿ, ಆಹಾರ ಸಿದ್ಧತೆಯಲ್ಲಿ ತೊಡಗಿದರು. ನೆಲದಲ್ಲೇ ಉದ್ಭವಿಸಿದ ಪುಟ್ಟ ಗುಂಡುಗಲ್ಲೊಂದು ಅಲ್ಲಿತ್ತು. ಇನ್ನೆರಡು ಕಲ್ಲುಗಳನ್ನು ತಂದು ಪಕ್ಕದಲ್ಲಿರಿಸಿ ಒಲೆ ಹೂಡಿ ಬೆಂಕಿ ಹಚ್ಚಿ ಅದರ ಮೇಲೆ ಮಡಕೆಯೊಂದರಲ್ಲಿ ನೀರು ಅಕ್ಕಿಯನ್ನು ಬೆರಸಿ ಇಟ್ಟರು. ಸ್ವಲ್ಪ ಸಮಯದಲ್ಲಿಯೇ ಜೌಗೇರಿ ಬೆಂಕಿಯೆಲ್ಲಾ ನಂದಿ ಹೋಯಿತು. ಅದನ್ನು ಕಂಡು ಪಾಕಗೈಯ್ಯುವವರು "ಏನು! ಮಡಕೆಯೇ ಒಡಕೋ, ಸೀಳು ಹೋದುದೋ, ತೂತೋ ಅಥವಾ ಹಳೆಯದೋ" ಎಂದು ನೋಡಲಾಗಿ ಮಡಕೆಯೊಳಗಿನ ನೀರು ಅಷ್ಟೇ ಪ್ರಮಾಣದಲ್ಲಿರುತ್ತದೆ. ಏನಿದು! ಎಂದು ನಂದಿದ ಕೆಂಡವನ್ನು ಬಗೆದು ನೋಡಲಾಗಿ ಆ ಗುಂಡುಗಲ್ಲಿನಿಂದ ಅಮೃತ (ಹಾಲು) ಹರಿದುಬರುತ್ತಿರುವುದು ಕಂಡು ಬರುತ್ತದೆ. ಎಲ್ಲರೂ ಅದನ್ನು ಕಂಡು ಆಶ್ಚರ್ಯಚಕಿತರಾಗಿ ಭಕ್ತಿಯಿಂದ ಬೇರೆ ಕಡೆ ಪಾಕಮಾಡಿ ಆ ಲಿಂಗಕ್ಕೆ ಅರ್ಚನೆಮಾಡಿ ಎಡೆಮಾಡಿ ತಾವೂ ಪ್ರಸಾದ ಸ್ವೀಕರಿಸಿ ಸಂತೋಷಪಡುತ್ತಾರೆ. ಅದನ್ನು ಅಮೃತೇಶ್ವರ ಲಿಂಗ ಎಂದು ಕರೆಯುತ್ತಾರೆ. ನಂತರ ತಾಂಬೂಲ ಮೆಲ್ಲಲು ಅಡಕೆಯಿದ್ದ ಹೇರೊಂದಕ್ಕೆ ಕೈಯಿಡುತ್ತಾರೆ. ಆಗ ಆ ಅಡಕೆಗಳೆಲ್ಲಾ ಅಳಲೆ ಕಾಯಾಗಿರುತ್ತವೆ. ನೋಡಲಾಗಿ ಎಲ್ಲಾ ಹೇರುಗಳಲ್ಲಿದ್ದ ಅಡಕೆಗಳೂ ಅಳಲೆಕಾಯಿಯಾಗಿರುತ್ತವೆ. ಎಲ್ಲಾ ಹೇರುಗಳನ್ನೂ ಮೂಲೆಯೊಂದರಲ್ಲಿ ಒಟ್ಟಿ ಅಮೃತೇಶ್ವರ ಲಿಂಗದೆದುರು ಬಂದು ಕೈಮುಗಿದು ನಿಂತು "ಶಿವನೇ! ಇದರಿಂದ ನಿನಗೆ ಅಳಲೇಶ್ವರನೆಂಬ ಹೆಸರು ರೂಢಿಯೊಳ ಗಾಯ್ತು. ಈ ಹೇರುಗಳಲ್ಲಿನ ಅಳಲೆಗಾಯ್ಗಳೆಲ್ಲಾ ಪುನಃ ಮೊದಲಿನಂತೆ ಅಡಕೆಗಳಾದರೆ ಅದನ್ನು ಮಧುರೆಯಲ್ಲಿ ಮಾರಿ ನಿನಗೆ ಗುಡಿಗೋಪುರಗಳನ್ನು ಕಟ್ಟಿಸಿ ಸೇವೆ ಮಾಡುತ್ತೇವೆ" ಎಂದು ಹರಕೆಮಾಡಿಕೊಳ್ಳುತ್ತಾರೆ. ಅದರಂತೆಯೇ ಆ ಹೇರುಗಳೆಲ್ಲಾ ಅಡಕೆಗಳಾಗಾಗುತ್ತವೆ. ಅವುಗಳನ್ನು ಮಧುರೆಯಲ್ಲಿ ಮಾರಿದಾಗ ಒಂದಕ್ಕೆ-ದು-ಆರರಂತೆ ಲಾಭಬರುತ್ತದೆ. ಅದರಿಂದ ಎಲ್ಲರೂ ಸಂತೋಷಗೊಂಡು ಬಂದು ಗುಡಿಗೋಪುರಗಳನ್ನು ಕಟ್ಟಿಸಿ ದಿವ್ಯಲಿಂಗೇಶ್ವರನೆಂದು ಕರೆದು ನಿತ್ಯ ನೈವೇದ್ಯ ನಂದಾದೀಪ ಗೀತವಾದ್ಯಾದಿ ಸೇವೆಯನ್ನು ಸಲ್ಲಿಸುತ್ತಾ ಅಲ್ಲಿಯೇ ನೆಲೆನಿಲ್ಲುತ್ತಾರೆ. ಮತ್ತು ಅದಕ್ಕೆ ವಾಣಿಜ್ಯಪುರ (ಹರದನಹಳ್ಳಿ) ಎಂದು ಕರೆಯುತ್ತಾರೆ. ಹೀಗೆ ಆ ಲಿಂಗಕ್ಕೆ ಅಮೃತೇಶ್ವರ, ಅಳಲೇಶ್ವರ, ದಿವ್ಯಲಿಂಗೇಶ್ವರ ಎಂಬ ಹೆಸರುಗಳು ರೂಢಿಯಲ್ಲಿ ಬರುತ್ತವೆ.

ಇದಾದ ಮೇಲೆ ಅಲ್ಲಿಯೇ ನೆಲೆನಿಂತ ಹರದರು ಜಂಗಮಾರ್ಚನೆ ತೀರ್ಥ ಪ್ರಸಾದ ಸ್ವೀಕರಣೆ ಮುಂತಾದ ಸಮಯಾಚಾರಕ್ಕಾಗಿ ಮಠವೊಂದನ್ನು ಕಟ್ಟಿಸಿ ಚರಮೂರ್ತಿಯೊಬ್ಬನನ್ನು ನೆಲೆಗೊಳಿಸುತ್ತಾರೆ. ಆ ಮೊದಲನೆಯ ಚರಮೂರ್ತಿಯೇ ಆದಿಗಣೇಶ್ವರ ಎಂಬುವರು. ಮುಂದಿನ ಗುರುಪರಂಪರೆಯ ಪಟ್ಟಿಯನ್ನು ಕವಿಯು ಎರಡು ಪದ್ಯಗಳಲ್ಲಿ ಹೀಗೆ ಪ್ರಸ್ತಾಪಿಸಿದ್ದಾನೆ.

ಅನಾದಿ ಗಣೇಶ್ವರ, ಆದಿಗಣನಾಥ, ನಿರ್ಮಾಯ ಗಣೇಶ, ನಿರಂಜನ ಗಣೇಶ್ವರ, ಜ್ಞಾನಾನಂದಗಣೇಶ್ವರ, ಆತ್ಮಗಣನಾಥ, ಅಧ್ಯಾತ್ಮ ಗಣನಾಥ, ರುದ್ರದೇವ, ಬಸವಪ್ರಭು, ಆದಿಲಿಂಗೇಶ್ವರ, ಚನ್ನವೀರೇಶ, ಗೋಸಲಯತೀಶ್ವರ, ಶಂಕರಾಚಾರ್ಯ, ದಿವ್ಯಲಿಂಗೇಶ್ವರ, ಗೋಸಲ ಚನ್ನಬಸವೇಶ, ಸಿದ್ದಲಿಂಗೇಶ್ವರರು.

ಹೀಗೆ ಈ ಹರದನಹಳ್ಳಿ ಮಠದ ಜಂಗಮ ಪರಂಪರೆಯಲ್ಲಿ ೧೫ನೆಯವರಾದ ಶ್ರೀ ಗೋಸಲಚನ್ನಬಸವೇಶ್ವರರು ಶೂನ್ಯ ಪೀಠಾಧಿಪತಿ ಗಳಾಗಿ ಲಿಂಗಾಲೀಲಾ ವಿಲಾಸದಲ್ಲಿರಲು ಒಂದು ದಿನ ವಿಳಾಸವಿಲ್ಲದ ಶಿವತೇಜೋರಾಶಿಯಪ್ಪ ಎಂಟುವರ್ಷದ ಬಾಲಕ ಹರದನಹಳ್ಳಿ ಪೇಟೆಬೀದಿಯಲ್ಲಿ ಕಾಣಿಸಿಕೊಳ್ಳುತ್ತಾನೆ. ಜನರೆಲ್ಲಾ ನೆರೆದು ನೋಡಿ ಆಶ್ಚರ್ಯಪಡುತ್ತಾರೆ. ಆ ಬಾಲಕ ನೇರವಾಗಿ ಗುರುಗಳ ಮಠಕ್ಕೆ ಬರುತ್ತಾನೆ. ಆ ಅದ್ಭುತ ತೇಜೋರಾಶಿಯ ಆ ಬಾಲಕನನ್ನು ಕಂಡು ಚನ್ನಬಸವಗುರು ಗಳೂ ಬೆರಗಾಗುತ್ತಾರೆ. 'ಶಿವ ಶಿವಾ! ಏನಿದೀ ಕೋಟಿ ಸೂರ್ಯಪ್ರಭಾ ಕಾಂತಿದೇಹ! ಶಿಶುವಿಗೆಲ್ಲಿಯದು ಈ ರೂಪು?" ಎಂದು ಆಶ್ಚರ್ಯಪಡು ತ್ತಾರೆ. ಆ ಬಾಲಕ ಬಂದವನೆ ಗುರು ಪದಕಮಲವನ್ನು ತನ್ನ ಕರಕಮಲದಿಂದ ಹಿಡಿದಪ್ಪಿ "ಮದ್ಗುರುವೆ ಸದ್ಗುರುವೆ ಚಿದ್ಗುರುವೆ! ನಿಮ್ಮಯ ಶಿಶುವಾನು; ಕರುಣದಿಂದ ಉಪದೇಶವಿತ್ತು ಸಲಹೆನ್ನ" ಎಂಬುದಾಗಿ ಪ್ರಾರ್ಥಿಸುತ್ತಾನೆ. ಆಗ ಚನ್ನಬಸವಗುರುವು "ಎಲೈ ಬಾಲಕನೆ ನೀನು ಕಾರಣಿಕ ಪುರುಷ! ಅಪರಿಮಿತ ಮಹಿಮ! ನಿನಗೆ ಉಪದೇಶ ಕೊಡಲು ನಾನು ಶಕ್ತನಲ್ಲ" ಎಂದು ಹಿಂಜರಿಯುತ್ತಾರೆ. ಆಗ ಆ ಬಾಲಕ "ಎಲೈ ಗುರುವೆ! ಭಯವದೇಕೆ? ನಾನು ನಿಮ್ಮ ಶಿಶುವು ತಿಳಿದುನೋಡು" ಎಂದು ಬೇಡಿದಾಗ ಆತನನ್ನು ಪರೀಕ್ಷಿಸದೇ ನಿಮಿತ್ತಮಾತ್ರಕ್ಕೆ ಆಗಮ ವಿಧಿಯಂತೆ ದೀಕ್ಷೆಮಾಡಿ ಜಂಗಮೋಪದೇಶವನ್ನು ಕೊಟ್ಟು "ಸಿದ್ದಲಿಂಗೇಶ್ವರ"ನೆಂಬ ನೂತನನಾಶ್ರಮದ ಅಭಿಧಾನವಿಟ್ಟು ಪಂಚಮುದ್ರೆಗಳನ್ನು ನೀಡುತ್ತಾರೆ. ನಂತರ ಸಿದ್ದಲಿಂಗ ಯತಿಯೂ ಚರಪಟ್ಟವನ್ನು ಪಡೆದು ಹೃತ್-ವಾಕ್-ಕಾಯಶುಶ್ರೂಷೆಗಳಿಂದ ಗುರುಸೇವೆಯಲ್ಲಿ ನಿರತರಾಗುತ್ತಾರೆ. ಇಲ್ಲಿಗೆ ಎರಡನೆಯ ಸಂಧಿಯ ಕಥೆಯು ಕೊನೆಯಾಗುತ್ತದೆ. ಈ ಸಂಧಿಯಲ್ಲಿ ೫೦ ಪದ್ಯಗಳಿವೆ.

*ವಿಶೇಷ ವಿಚಾರ*

೧. ಸಂಧಿಯ ಪ್ರಾರಂಭದಲ್ಲಿ ಬರುವ ಕನ್ನಡನಾಡಿನ ವರ್ಣನೆಯಲ್ಲಿನ ಕಲ್ಪನೆಯನ್ನು ಗರಿಗೆದರಿಸುವ ಉತ್ಪ್ರೇಕ್ಷೆ ರಮಣೀಯತೆಗಳಲ್ಲಿ ಕವಿಶಬ್ದದ ಅರ್ಥವನ್ನು ಯಾರಾದರೂ ಮನಗಾಣಬಹುದು. ನೋಡಿ : ೨ ಪದ್ಯಗಳು ೨ ರಿಂದ ೨೨.

೨. ಈ ಹರದಹಳ್ಳಿ ನಿರಂಜನಜಂಗಮಪೀಠದ ಪರಂಪರೆಯ ವಿಷಯದಲ್ಲಿ ಈ ಸಿದ್ಧೇಶ್ವರ ಪುರಾಣಕ್ಕೂ ಸಿದ್ದಲಿಂಗೇಶ್ವರ ವಚನಕ್ಕೂ ಹೆಸರಿನ ಏಕಾನುಕ್ರಮಣಿಕೆಯಿರುವುದರಿಂದ ಮತ್ತೆಯಾವ ವ್ಯತ್ಯಾಸಕ್ಕೂ ಊಹೆಗೂ ಅವಕಾಶವಿರುವುದಿಲ್ಲ. ನೋಡಿ : ಸಿದ್ಧೇಶ್ವರಪುರಾಣ : ಸಂಧಿ-೨ ಪದ್ಯ ೩೧-೩೩, ಮತ್ತು ಸಿದ್ದಲಿಂಗೇಶ್ವರ ವಚನ : ಆದರೆ ನಿರಂಜನವಂಶರತ್ನಾಕರದಲ್ಲಿ ಮತ್ತು ನಿರಂಜನವಂಶ ದರ್ಪಣದಲ್ಲಿ ಈ ಪರಂಪರೆಯ ಮೊದಲನೆಯವರಾದ ಆದಿಗಣೇಶ್ವರರ ಹಿಂದೆ ಸಿದ್ಧರಾಮ, ಚೆನ್ನಬಸವಣ್ಣ, ಅಲ್ಲಮಪ್ರಭುಗಳನ್ನು ಸೇರಿಸಿ ಅಲ್ಲಮ ಪ್ರಭು ಮೊದಲುಗೊಂಡು ಶೂನ್ಯಪೀಠದ ಪರಂಪರೆಯನ್ನು ಹೇಳಲಾಗಿದೆ.

೩. ಸಿದ್ದಲಿಂಗೇಶ್ವರರ ತಂದೆತಾಯಿಗಳ ಹೆಸರನ್ನು ಹೇಳದೇ 'ಎಂಟು ವರ್ಷದ ಬಾಲಕನೊಬ್ಬ ತಳತಳಿಸಿ ಬೆಳಗುತ್ತಾ ಪುರವಪೊಕ್ಕನು' ಎಂದು ಕವಿಯು ಹೇಳುವಲ್ಲಿ ಒಂದು ದಾರ್ಶನಿಕ ಹೊಳಹು ಇದೆ. ಅದೇನೆಂದರೆ, ಅವತಾರಗಳು ಮೂರು ವಿಧ. ಆವೇಶಾವತಾರ, ಪರಶುರಾಮಾದಿಗಳಂತೆ ಅಂಶಾವತಾರ, ರಾಮ, ಕೃಷ್ಣಾದಿಗಳಂತ ಪೂರ್ಣವತಾರ, ಶಿವಶರಣರಂತೆ. ಅದರಂತೆ ಸಿದ್ದಲಿಂಗೇಶ್ವರರು ಪೂರ್ಣವತಾರಿಗಳು.

೪. ಸಾಮಾನ್ಯ ಶಿಷ್ಯನಾದರೆ ಅವನಲ್ಲಿ ಮಹಾಜ್ಞಾನವುದಯ (ಶಕ್ತಿಪಾತ) ವಾಗಿರುವುದನ್ನು ನಡೆನುಡಿಗಳ ಚಿಹ್ನೆಗಳಿಂದ ತಿಳಿದು ಪರೀಕ್ಷಿಸಿ ಮೂರೇಳು (೩ x ೭ = ೨೧) ದೀಕ್ಷೆಯನ್ನು ಕೊಡಬೇಕು. ಆದರೆ ಇಲ್ಲಿ ಸಿದ್ದಲಿಂಗೇಶ್ವರರು ಅನಾದಿಯುಕ್ತರೂ, ಸಾಕ್ಷಾತ್ ಶಿವಾಂಶಿಕರು ಆದ್ದರಿಂದ ಕೇವಲ ಜಂಗಮದೀಕ್ಷೆ ಮತ್ತು ಉಪದೇಶವಿಧಿಗಳನ್ನು ಮಾತ್ರ ಗುರುಗಳು ಕೊಡುತ್ತಾರೆ.

೫. ಶಿಷ್ಯನು ಎಷ್ಟೇ ಸಾಧಕನಿರಲಿ ಸಿದ್ಧನಿರಲಿ ತನ್ನ ಶ್ರೀ ಗುರುವನ್ನು ತ್ರಿವಿಧ ಶುಶ್ರೂಷೆಯಿಂದ ಸೇವೆಮಾಡಬೇಕು. ತ್ರಿವಿಧ ಶುಶ್ರೂಷೆ ಯಾವುವೆಂದರೆ : ಹೃತ್‌ಶುಶ್ರೂಷೆ : ತನ್ನ ಹೃದಯ ಕಮಲದಲ್ಲಿ ಶ್ರೀಗುರುವಿನ ರೂಪನ್ನು ಸದಾ (ಮನಸ್ಸಿನಲ್ಲಿ) ಧ್ಯಾನಿಸುವುದು. ಇದರಿಂದ ಪತಿವ್ರತೆಯು ತನ್ನ ಪತಿಯ ರೂಪನ್ನು ಸದಾ ಚಿಂತಿಸುವುದರಿಂದ ಪತಿಯಲ್ಲಿ ಏಕನಿಷ್ಠೆಗಟ್ಟಿಗೊಳ್ಳುವಂತೆ, ಭ್ರಮರ ವನ್ನು ಚಿಂತಿಸುವ ಕೀಟವು ಭ್ರಮರವೇ ಆಗುವಂತೆ ಶಿಷ್ಯನಿಗೂ ತನ್ನ ಶ್ರೀಗುರುವಿನಲ್ಲಿ ಏಕನಿಷ್ಠೆ ಬೆಳೆದು ಗುರುವೇ ತಾನಾಗುವನು. ಇದನ್ನು ಭಾವಶುಶ್ರೂಷೆ ಎಂದೂ ಕರೆಯುವರು. ವಾಕ್‌ಶುಶ್ರೂಷೆ: ಮಾಳ್ಪ ಕಾರ್ಯವೇನುಂಟೆಂದು ಗುರುವನ್ನು ವಿನಯದಿಂದ ಕೇಳುವುದು. ಮತ್ತು ಗುರುವಿಗೆ ಪ್ರಿಯಕರವಾದ ಮಾತುಗಳನ್ನು ಆಡುವುದು. ಕಾಯಶುಶ್ರೂಷೆ : ಭಕ್ತಿಯಿಂದ ತನುವನ್ನು ಅರ್ಪಿಸಿ ಗುರುವಿನ ಪಾದಮರ್ದನ ಮೊದಲುಗೊಂಡು ಪವಡಿಸಿಸುವುದು, ಸ್ನಾನಮಾಡಿಸುವುದು, ಪೂಜೆಗೆ ಅಣಿಮಾಡುವುದು, ಪ್ರಸಾದ ನೀಡುವುದೇ ಮುಂತಾದ ಕರ್ಮಗಳು. ಇದರಿಂದ ಕಾಮಧೇನುವಿಗೆ ಸೇವೆಮಾಡಿದವನು ಅಮೃತವನ್ನು ಪಡೆಯುವಂತೆ ಶ್ರೀಗುರುವಿನ ಕಾಯಸೇವೆಯಿಂದ ಕಾರುಣ್ಯಾಮೃತವನ್ನು ಪಡೆಯುತ್ತಾನೆ. ಹೀಗೆ ಗುರುಸೇವೆಯಿಂದ ತನ್ನ ಶ್ರೀಗುರುವಿನಲ್ಲಿ ಏಕನಿಷ್ಠೆ, ಗುರುಕಾರುಣ್ಯ ಹಾಗೂ ಪೂರ್ವಾಶ್ರಯದ ವಾಸನಾಕ್ಷಯ – ಇವುಗಳ ಸಂಪತ್ತಿ ಯುಂಟಾಗುತ್ತದೆ.

೬. ಪಂಚಮುದ್ರೆಗಳು : ಜಂಗಮೋಪದೇಶ ವಿಧಿಯ ನಂತರ ಚರಮೂರ್ತಿಗೆ ಈ ಐದು ಮುದ್ರೆಗಳನ್ನು ಗುರುವು ಕೊಡಬೇಕೆಂಬುದಾಗಿ ಈ ಪುರಾಣದ ೫ನೆಯ ಸಂಧಿಯ ೫ನೆಯ ಪದ್ಯದಲ್ಲಿ ಹೇಳಿದೆ. (೧) ಸಮತೆಯ ಕುರುಹಾದ ಭಸ್ಮಘಂಟಿಕೆ, (೨) ಸದ್ಭಾವನೆಯ ದೃಢವಾದ ದಂಡ, (೩) ದಯೆಯ ಸಂಕೇತವಾದ ಕಮಂಡಲ, (೪) ವೈರಾಗ್ಯ ಪ್ರತೀಕವಾದ ಕಪ್ಪರ (ಭಿಕ್ಷಾಪಾತ್ರೆ) ಮತ್ತು (೫) ಸುಜ್ಞಾನವೆನಿಸುವ ಕಂತೆ. (ಕಪನಿ) ಇದರ ಜೊತೆಗೆ ಶಿವಾನುಭವವನ್ನು ಪಡೆಯಲು ಶೂನ್ಯಸಂಪಾದನೆ, ಸಿದ್ಧೇಶ್ವರ ಪುರಾಣ, ನಿಜಗುಣರ ಕೈವಲ್ಯ ಸಾಹಿತ್ಯ, ಸರ್ಪಣ್ಣಪ್ಪ ಮೊದಲಾದವರ ಅನುಭಾವಗೀತೆಗಳು ಮುಂತಾದ ಶಿವಶಾಸ್ತ್ರ ಗ್ರಂಥಗಳ ಗ್ರಂಥ.

★

# ಕತ್ತಲು ಮತ್ತು ಬೆಳಕು

– ಬಸಪ್ಪ ಉಪ್ಪಾರ
ರಾಮನಗರ,
ಹಗರಿಬೊಮ್ಮನಹಳ್ಳಿ – ೫೮೩೨೧೨
ಬಳ್ಳಾರಿ ಜಿಲ್ಲೆ.

**ಕ**ತ್ತಲು ಬೆಳಕನ್ನು ನುಂಗುವ ಹೊತ್ತು. ಇದಕ್ಕೆ 'ಮುಸ್ಸಂಜೆ' ಎಂದು ಹೇಳುತ್ತಾರೆ. ಈ ಮುಸ್ಸಂಜೆಯನ್ನು ಕವಿಗಳು ಬಹುವಾಗಿ ವರ್ಣಿಸುತ್ತಾರೆ. ಪಶು, ಪಕ್ಷಿ, ಪ್ರಾಣಿಗಳು ಗೂಡು ಸೇರುವ ಸಮಯವೆಂದು, ಪಡುವಣದ ಬಾನು ಕೆಂಬಣ್ಣದಿಂದ ತುಂಬಿ ತುಂಬಾ ಆಹ್ಲಾದಕರವಾಗಿರುತ್ತದೆಂದು ಹೇಳಿದ್ದಾರೆ. ಹಗಲೆಲ್ಲಾ ಎಚ್ಚರವಿದ್ದು ರಾತ್ರಿ, ಗಿಡ-ಮರ, ಬಳ್ಳಿಗಳು ತಮ್ಮ ಎಲೆಗಳನ್ನು ಮುದುರಿಕೊಂಡು ನಿದ್ರಿಸುತ್ತವೆ. ಮೊಗ್ಗು ಅರಳಿ ಹೂವಾಗಲು ರಾತ್ರಿ (ಕತ್ತಲು) ಸಹಕರಿಸುತ್ತದೆ. ಗಿಡ, ಮರಗಳು, ಚಿಗುರೊಡೆದು ಬೆಳೆಯಲು ರಾತ್ರಿ ಸಹಕರಿಸುತ್ತದೆ. ಕೂಲಿಕಾರರು, ರೈತರು ಮತ್ತು ಶ್ರಮಜೀವಿಗಳು ದುಡಿದು ಹಗಲೆಲ್ಲಾ ದಣಿವಾಗುತ್ತಿದ್ದಂತೆ ವಿಶ್ರಾಂತಿಗಾಗಿ ರಾತ್ರಿಯ ಸಮಯಕ್ಕೆ ಕಾಯುತ್ತಿರುತ್ತಾರೆ.

**ಪ**ಶು, ಪಕ್ಷಿ, ಪ್ರಾಣಿಗಳಲ್ಲದೆ, ಕ್ರಿಮಿಕೀಟಗಳು, ಮಾನವರು ದಾನವರಾದಿಯಾಗಿ ನಿದ್ರಿಸಿ ವಿಶ್ರಾಂತಿ ಪಡೆಯುವುದಕ್ಕಾಗಿ ಕತ್ತಲನ್ನು ಕಾಯುತ್ತಿರುತ್ತಾರೆ. ಕತ್ತಲು ಹೆಚ್ಚಾದಂತೆ ಜೀವಕೋಟಿ ಗಾಢವಾಗಿ ನಿದ್ರೆಯಲ್ಲಿ ಮುಳುಗಿರುತ್ತದೆ. ಅಲ್ಲೊಂದು ಇಲ್ಲೊಂದು ಕೆಲ ಪ್ರಾಣಿಗಳು ಕತ್ತಲಲ್ಲಿ ಆಹಾರ ಹುಡುಕುವುದಕ್ಕಾಗಿ ಕೆಲವು ಸಮಯ ಮಾತ್ರನಿದ್ರಿಸುವುದಿಲ್ಲ. ಆದರೆ ಇನ್ನೂ ಕತ್ತಲಿರುವಾಗೆ ತಮ್ಮ ಗೂಡು ಸೇರಿಕೊಳ್ಳುತ್ತವೆ. ಕತ್ತಲಲ್ಲಿ ಸಿಗುವ ಶಾಂತಿ-ವಿಶ್ರಾಂತಿಗಳು ಹಗಲಲ್ಲಿ ಸಿಗುವುದು ಸಾಧ್ಯವಿಲ್ಲ! ರಾತ್ರಿ ನಾವು ಮಲಗುವ ಮುನ್ನ ಝಗ ಝಗಿಸುವ ದೀಪದ ಬೆಳಕನ್ನು ಆರಿಸಿಬಿಡುತ್ತೇವೆ. ಬೆಳಕುಬೇಕಾದರೆ ಕತ್ತಲು ಬೇಕಲ್ಲವೆ ? ಕತ್ತಲಿದ್ದರೆ ತಾನೆ ಬೆಳಕಿನ ಮಹತ್ವ ! ''ತಮಸೋಮಾ ಜ್ಯೋತಿರ್ಗಮಯ'' ಅಂದರೆ ಕತ್ತಲಿನಿಂದ ಬೆಳಕಿನೆಡೆಗೆ ಎಂದಾಗುತ್ತದೆ. ಆದರೆ, ವಿಶ್ರಾಂತಿ ಬಯಸಿ ನಿದ್ರಿಸಲು ನಾವು ಕತ್ತಲಿನೆಡೆಗೆ ಹೋಗುವುದು ಸಹಜ.

ವಿದ್ಯಾಭ್ಯಾಸ, ಯೋಗಾಭ್ಯಾಸಗಳನ್ನು ನಾವು ಬೆಳಗಿನ ಜಾವ ಅಂದರೆ ಇನ್ನೂ ಕತ್ತಲಿರುವಾಗಲೇ ಮಾಡುತ್ತೇವೆ. ಇಂಥ ಸಮಯಕ್ಕೆ ಬ್ರಾಹ್ಮೀ ಮುಹೂರ್ತವೆಂದು ಕರೆಯುತ್ತಾರೆ. ಸ್ನಾನ-ಪೂಜಾದಿಗಳನ್ನು ವಿಧಿವತ್ತಾಗಿ ಮಾಡುತ್ತೇವೆ. ರಾತ್ರಿ ಊಟದ ನಂತರ ನಮ್ಮ ಜನಪದರು, ಹಂತಿಹಾಡು, ಸಂಪ್ರದಾಯದ ಹಾಡು, ಸೋಬಾನದ ಹಾಡುಗಳನ್ನು ರಚಿಸಿ ಹಾಡುತ್ತಾರೆ. ರಾತ್ರಿ ತಮ್ಮ ಓಣಿಯಲ್ಲಿ ಒಂದು ಕಡೆ ಎಲ್ಲರೂ ಸೇರಿ ಕೋಲಾಟ, ಬೈಲಾಟ ಮತ್ತು ನಾಟಕಗಳನ್ನು ಕಲಿಯುತ್ತಾರೆ. ಜಾತ್ರೆ, ಹಬ್ಬ, ಹರಿದಿನಗಳಲ್ಲಿ ದೇವ ಮುಂದೆ ಹಾಡಿ ಕುಣಿದು, ಕುಪ್ಪಳಿಸುವುದು ರಾತ್ರಿಯೇ. ಇವರು ಬೆಳಕನ್ನು ಪ್ರೀತಿಸುವಂತೆ ಕತ್ತಲನ್ನೂ ಪ್ರೀತಿಸುತ್ತಾರೆ.

**ಕ**ತ್ತಲನ್ನು (ಕಪ್ಪನ್ನು) ನಾವು ಹೀನಾಯವಾಗಿ ಕಾಣುತ್ತೇವೆ. ಹೆಣ್ಣು ಕಪ್ಪಾಗಿದೆ ಎಂದು ತಿರಸ್ಕರಿಸುತ್ತೇವೆ. ಕಪ್ಪಗಿದ್ದವರು ಸುಂದರವಲ್ಲವೆಂಬ ಭಾವನೆ ನಮ್ಮಲ್ಲಿ ಬಹಳವಾಗಿ ಬೆಳೆದುಬಂದಿದೆ. ಹಾಗಾಗಿ ಕಪ್ಪಗಿರುವ ಹೆಣ್ಣನ್ನು 'ಕಪ್ಪುಸುಂದರಿ' ಎಂದಿದ್ದಾರೆ. ಕಪ್ಪಿನಲ್ಲೂ ಸುಂದರತೆಯನ್ನು ಕಂಡಿದ್ದಾರೆ ನಮ್ಮ ಕವಿ ಪುಂಗವರು. ಹಿಂದೆ ಋಷಿ ಮುನಿಗಳು ಯಜ್ಞಯಾಗಾದಿಗಳನ್ನು ರಾತ್ರಿ ಪ್ರಶಾಂತವಾದ ವಾತಾವರಣದಲ್ಲಿ ಮಾಡುತ್ತಿದ್ದರು.

**ತಾ**ಯಿಯ ಒಡಲಾಳದ ಕತ್ತಲಿನಿಂದ ಮಗು ಹುಟ್ಟಿ ಬಂದಿದ್ದರೂ ಪವಿತ್ರ ಭಾವನೆಗಳನ್ನು ಹೊತ್ತು ತಂದಿರುತ್ತದೆ. ಮುಂದೆ ಮಗು ಬೆಳಕಿನಲ್ಲಿ ಬೆಳೆಯುತ್ತದೆ. ದೊಡ್ಡದಾಗುತ್ತಿದ್ದಂತೆ ನಕ್ಕರೆ ನಗುತ್ತದೆ ಹೊರತು, ಅತ್ತರೆ ಅಳುವುದಿಲ್ಲ ! ಸುಖದಲ್ಲಿ ಮಾತ್ರ ಭಾಗಿಯಾಗುತ್ತದೆ. ದುಃಖದಲ್ಲಿ ಭಾಗಿಯಾಗುವುದಿಲ್ಲ ! ಕತ್ತಲನ್ನು ಕಡೆಗಣಿಸಿ ಬರೀ ಬೆಳಕನ್ನೇ ಪ್ರೀತಿಸಬಾರದು. ಕತ್ತಲನ್ನು ಪ್ರೀತಿಸಿ ಬೆಳಕನ್ನೂ ಮರೆಯಬಾರದು. ಎರಡನ್ನೂ ಪ್ರೀತಿಸಬೇಕು. ಇದಕ್ಕೆ ಇರಬೇಕು ಶ್ರೀಕೃಷ್ಣ ಪರಮಾತ್ಮನು ''ಸುಖ ದುಃಖಗಳನ್ನು ಸಮಾನವಾಗಿ ನೋಡು'' ಎಂದು ಹೇಳಿರುವುದು. ಕತ್ತಲು ಮತ್ತು ಬೆಳಕು ಎರಡೂ ಸಮಾನವೆಂದು ಭಾವಿಸಬೇಕು. ಕತ್ತಲೆಂದರೆ ಮೂಗು ಮುರಿಯುವವರೇ ಜಾಸ್ತಿ.

**ಮಿ**ನುಗುವ ನಕ್ಷತ್ರಗಳನ್ನು ನಾವು ನೋಡಲು ಕತ್ತಲಿಗಾಗಿ ನಾವು ಕಾಯಲೇಬೇಕು. ಹೊಳೆಯುವ ಚಂದ್ರನ ಹಾಲಿನಂಥ ಬೆಳಕನ್ನು ನೋಡಲು ಕತ್ತಲನ್ನು ಎದುರುನೋಡಲೇಬೇಕು. ಬೆಳಕು ಕತ್ತಲಿಗಾಗಿ ಕಾಯಬೇಕು, ಕತ್ತಲು ಬೆಳಕಿಗಾಗಿ ಕಾಯಬೇಕು. ಹೃದಯ ಉಳ್ಳವರು ಬೆಳಕನ್ನೂ ಪ್ರೀತಿಸುವಂತೆ ಕತ್ತಲನ್ನೂ ಪ್ರೀತಿಸುತ್ತಾರೆ. 'ಪ್ರೀತಿಯಿಲ್ಲದೆ ಗಿಡ, ಮರ, ಬಳ್ಳಿಗಳು ಚಿಗುರುವುದಿಲ್ಲ' ಎಂದು ಕವಿ ಹೇಳುತ್ತಾನೆ. ಪ್ರೀತಿಯಿಂದ ಎಲ್ಲವನ್ನು ಎಲ್ಲರನ್ನೂ ಕಾಣಬೇಕು.

★





# ಪೂಜ್ಯ ಶ್ರೀ ಶ್ರೀ ಅಟವೀಸ್ವಾಮಿಗಳ ಮತ್ತು ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ಪುಣ್ಯಾರಾಧನಾ ಸಮಾರಂಭ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಪೂಜ್ಯ ಶ್ರೀ ಶ್ರೀ ಬಸವಲಿಂಗ ಪಟ್ಟದ್ದೇವರು, ಭಾಲ್ಕಿ ಹಿರೇಮಠ ಸಂಸ್ಥಾನ, ಕನಕಪುರ ದೇಗುಲಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು, ಡಾ. ಸಿ.ಎಂ. ಕುಂದಗೋಳ ಮತ್ತು ಪ್ರೊ. ವಿಕ್ರಮ ವಿಸಾಜಿ.



ಸಮಾರಂಭದಲ್ಲಿ ಭಾಗವಹಿಸಿದ್ದ
ವಿವಿಧ ಮಠಗಳ
ಹರಗುರು ಚರಮೂರ್ತಿಗಳು







ಕಿಕ್ಕಿರಿದು ತುಂಬಿದ
ಭಕ್ತರ ಸಮೂಹ

## ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭ



ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಜ್ಯೋತಿ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ಪ್ರೊ. ಎಸ್.ಜಿ. ಸಿದ್ಧರಾಮಯ್ಯ ಮತ್ತು ಡಾ. ಎಂ.ವಿ. ವಸು ಅವರು ಉಪಸ್ಥಿತರಿದ್ದರು.












ಪರಮಪೂಜ್ಯ ಶ್ರೀ ಶ್ರೀಗಳಿಂದ ಆಶೀರ್ವಚನ

## ಶ್ರೀಮಠದಲ್ಲಿ ೮೭ನೆಯ ಸಂಸ್ಕೃತೋತ್ಸವ

'ಸಂಸ್ಕೃತಭಾಷೆ ಸುಲಭ ಸುಮಧುರ ಸುಲಲಿತ ಸುಂದರ ಸಮಮನೋಹರವಾದದ್ದು. ಕ್ಲಿಷ್ಟವಲ್ಲ ಕಠಿಣವಲ್ಲ. ಸಂಸ್ಕೃತಭಾಷೆ ಮೃತಭಾಷೆಯಲ್ಲ; ಅಮೃತಭಾಷೆ' ಎಂದು ಉಡುಪಿ ಪುತ್ತಿಗೆ ಮಠದ ಶ್ರೀ ಶ್ರೀ ಸುಗಣೇಂದ್ರ ತೀರ್ಥರು ನುಡಿದರು. ಅವರು ಶ್ರೀಮಠದಲ್ಲಿ ಜನವರಿ ೪ರಂದು ಏರ್ಪಡಿಸಿದ್ದ ೮೭ನೆಯ ಸಂಸ್ಕೃತೋತ್ಸವ ಸಮಾರೋಪ ಸಮಾರಂಭದ ಸಮಾರೋಪ ಭಾಷಣ ಮಾಡುತ್ತಾ ತಿಳಿಸಿದರು. ಅವರು ತಮ್ಮ ಆಶೀರ್ವಚನದಲ್ಲಿ ಇಲ್ಲಿರುವ ಬಾಲಕರೆಲ್ಲರೂ ಸಂಸ್ಕೃತವನ್ನು ಬಲ್ಲವರಾಗಿದ್ದಾರೆ. ಸಂಸ್ಕೃತ ಭಾಷೆ ಸುಸ್ಪಷ್ಟವಾದ ಭಾಷೆ. ಸ್ಪಷ್ಟಭಾವನೆ. ಸ್ಪಷ್ಟವಿಚಾರ ಸ್ಪಷ್ಟ ಆಚಾರಗಳು ಬರಬೇಕಾದರೆ ಬಾಲ್ಯದಿಂದಲೇ ಸಂಸ್ಕೃತವನ್ನು ಕಲಿಯಬೇಕು. ಸಂಸ್ಕೃತಭಾಷೆ ಸಂಸ್ಕಾರಯುಕ್ತವಾದ ಭಾಷೆ. ಸಂಸ್ಕೃತಭಾಷೆಯನ್ನು ಕಲಿಯುವುದರಿಂದ ನಾವು ಸುಸಂಸ್ಕೃತರಾಗುತ್ತೇವೆ. ಸಂಸ್ಕೃತವನ್ನು ಕಲಿಯದಿದ್ದರೆ ಅಸಂಸ್ಕೃತರಾಗುತ್ತೇವೆ ಎಂದು ತಿಳಿಸಿದರು.

**ಪೂ**ಜ್ಯ ಶ್ರೀಗಳವರು ಶ್ರೀಮಠದ ಸೇವಾಕ್ಷೇತ್ರ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಾಧನೆಯ ಬಗ್ಗೆ ಮುಕ್ತಕಂಠದಿಂದ ಶ್ಲಾಘಿಸಿದರು. ಸಿದ್ಧಗಂಗಾ ಶ್ರೀಗಳು ಸಿದ್ಧಪುರುಷರು. ಭಗೀರಥ ಗಂಗೆಯನ್ನು ತಂದಂತೆ ಸಂಸ್ಕೃತ ಗಂಗೆಯನ್ನು ಇಲ್ಲಿ ತಂದು ನೆಲೆಗೊಳಿಸಿದ್ದಾರೆ. ಇದು ಸಿದ್ಧಿ ಸಿದ್ಧಗಂಗೆ, ಶುದ್ಧಗಂಗೆ. ಇಂದು ಪರಮಪೂಜ್ಯರ ದರ್ಶನದಿಂದ ನಮಗೆ ಬಹಳ ಸಂತೋಷವಾಗಿದೆ. ನಮ್ಮ ಪರ್ಯಾಯದ ಅವಧಿ ಇನ್ನು ನಾಲ್ಕುವರ್ಷಗಳಿದೆ. ಈ ಪರ್ಯಾಯದ ಅವಧಿಯಲ್ಲಿ ಶತಾಯುಷಿಗಳಾದ ಸಿದ್ಧಗಂಗಾ ಶ್ರೀಗಳನ್ನು ನಮ್ಮ ಉಡುಪಿಕ್ಷೇತ್ರಕ್ಕೆ ಕರೆಸಿ ಶತಮಾನೋತ್ಸವವನ್ನು ಆಚರಿಸುತ್ತೇವೆ. ಇಷ್ಟೊಂದು ಮಂದಿ ಬಾಲಕರು ಇಲ್ಲಿ ಸಂಸ್ಕೃತವನ್ನು ಕಲಿಯುತ್ತಿರುವುದು ಸಂತೋಷ ದಾಯಕವಾಗಿರುತ್ತದೆ ಎಂದು ಪ್ರಶಂಸಿದರು.

**ಮು**ಖ್ಯ ಅತಿಥಿಗಳಾಗಿ ಆಗಮಿಸಿದ್ದ ಉರ್ದು ಮತ್ತು ಅಲ್ಪಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶಕರಾದ ಶ್ರೀ ಎನ್.ಎಂ.




ಉಡುಪಿ ಪುತ್ತಿಗೆ ಮಠದ ಶ್ರೀ ಶ್ರೀ ಸುಗಣೇಂದ್ರ ತೀರ್ಥರು ಅವರಿಂದ ಸಮಾರೋಪ ಭಾಷಣ. ವೇದಿಕೆಯಲ್ಲಿ : ಶ್ರೀಮಠದ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಉರ್ದು ಮತ್ತು ಅಲ್ಪಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶಕರಾದ ಶ್ರೀ ಎಸ್.ಎಂ. ವಾಲಿ ಅವರು, ಪೂಜ್ಯ ಶ್ರೀ ಶ್ರೀಗಳವರು, ಶ್ರೀಪಾದರಾಜ ಮಠದ ಶ್ರೀ ಶ್ರೀ ೧೦೮ ವಿಜ್ಞಾನ ನಿಧಿತೀರ್ಥರು ಅವರನ್ನು ಕಾಣಬಹುದು.

ಪನಾಲಿ ಅವರು ಶಿಕ್ಷಣ ಕ್ಷೇತ್ರದಲ್ಲಿ ಸ್ವಾಮೀಜಿಯವರು ದೊಡ್ಡ ಸೇವೆಯನ್ನು ಮಾಡಿದ್ದಾರೆ. ಅಂತಹ ಸಾಧನೆ ದೇವರಿಂದ ಮಾತ್ರ ಸಾಧ್ಯ. ಸ್ವಾಮೀಜಿಯವರನ್ನು ನೋಡಿದಾಗ ನನಗೆ ಇಂಗ್ಲೀಷಿನ ಒಂದು ವಾಕ್ಯ ನೆನಪಾಗುತ್ತದೆ. ನನ್ನ ಪ್ರಕಾರ ಸ್ವಾಮೀಜಿ ಎಂದರೆ 'Personalitification of God on Earth' ದೇವರು ಮೇಲಿದ್ದಾನೆ ಎಂಬುದು ನನ್ನ ನಂಬಿಕೆ. ಅವನೆಂದೂ ಕೆಳಗಿಳಿದು ಬಂದಿಲ್ಲ. ಯಾವಾಗ ಇಳಿದುಬರುತ್ತಾನೋ ಗೊತ್ತಿಲ್ಲ. ಒಂದು ವೇಳೆ ಕೆಳಗಿಳಿದು ಬಂದರೆ ಹೇಗೆ ಕಾಣಬಹುದು ಎಂದರೆ ನಮ್ಮ ಸ್ವಾಮೀಜಿ ಹಾಗೆ ಕಾಣಬಹುದು ಎಂದು ಶ್ರೀ ಪನಾಲಿ ಅವರು ನುಡಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮುಳುಬಾಗಿಲು ಶ್ರೀಪಾದರಾಜ ಮಠದ ಶ್ರೀ ಶ್ರೀ ವಿಜ್ಞಾನನಿಧಿತೀರ್ಥರು ತಮ್ಮ ಅಧ್ಯಕ್ಷೀಯ ಆಶೀರ್ವಚನದಲ್ಲಿ ''ನಾನು ಕೋಲಾರ ಜಿಲ್ಲೆಯವನಾದರೂ ೧೯೪೬ರಲ್ಲಿ ತುಮಕೂರಿನಲ್ಲಿ ಬಿ.ಎ. ಓದುತ್ತಿದ್ದೆ. ಅಂದಿನಿಂದಲೂ ನಾನು ಸ್ವಾಮಿಗಳವರನ್ನು ನೋಡಿದ್ದೇನೆ. ಅಂದು ಮಠಕ್ಕೇನೂ ಆಸ್ತಿ ಹಣವಿರಲಿಲ್ಲ. ತಮ್ಮ ಸ್ವಂತದೇಹಶ್ರಮದಿಂದ ಈ ಮಠವನ್ನು ಇಷ್ಟು ಅಭಿವೃದ್ಧಿಪಡಿಸಿದ್ದಾರೆ. ಇಷ್ಟೊಂದು ವಿದ್ಯಾರ್ಥಿಗಳಿಗೆ ಅನ್ನವಸ್ತ್ರ ವಿದ್ಯೆನೀಡಿ ಇಡೀ ಮಠಾಧಿಪತಿಗಳಿಗೆ ಆದರ್ಶರಾಗಿದ್ದಾರೆ, ಇವರನ್ನು ನೋಡಿ ಉಳಿದವರು ಪ್ರಾರಂಭ ಮಾಡಿದ್ದಾರೆ. ಈ ನಿಟ್ಟಿನಲ್ಲಿ ಇವರೇ ಮೊದಲಿಗರು. ತಮ್ಮ ಆಚಾರ ವಿಚಾರಗಳನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಆರೋಗ್ಯವನ್ನು ಕಾಪಾಡಿಕೊಂಡು ಬರುತ್ತಿದ್ದಾರೆ. ಆರೋಗ್ಯದ ಗುಟ್ಟನ್ನು ನಾವೂ ತಿಳಿಯಬೇಕಾಗಿದೆ. ನಮಗೆ ಆಶ್ರಮವಾದ ಮೇಲೆ ನಾವು ಬರುತ್ತಿರುವುದು ಎರಡನೇ ಸಾರಿ. ಶ್ರೀಗಳವರು ಹೊಸ ಹೊಸ ಯೋಜನೆಗಳನ್ನು ಕಾರ್ಯಕ್ರಮಗಳನ್ನು ಸಮಾಜ ಸೇವೆಗೆ ಹಾಕಿಕೊಳ್ಳುತ್ತಾರೆಂದು ಕೇಳಿದ್ದೇವೆ. ನಾವೂ ಅವುಗಳನ್ನು ನೋಡಬೇಕು. ಅವರಿಂದ ಮಾರ್ಗದರ್ಶನ ಪಡೆಯಬೇಕು ಎನ್ನುವ ಉದ್ದೇಶದಿಂದ ನಾವು ಬಂದಿದ್ದೇವೆ. ಶ್ರೀಗಳ ದರ್ಶನದಿಂದ ನಮಗೆ ಸಂತೋಷವಾಗಿದೆ. ಅವರ ಸರಳ ಜೀವನ ಆಚಾರ ವಿಚಾರ ಎಲ್ಲರಿಗೂ ಅನುಕರಣೀಯವಾಗಿವೆ'' ಎಂದು ನುಡಿದರು.

ದಿವ್ಯ ಸಾನ್ನಿಧ್ಯವನ್ನು ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ ''ನೀವೆಲ್ಲರೂ ಇಂದು ಭಾಗ್ಯವಂತರಾಗಿ





ದ್ದೀರಿ. ಇಬ್ಬರು ಶ್ರೇಷ್ಠ ಸಂತರ ದರ್ಶನಭಾಗ್ಯ ನಿಮ್ಮದಾಗಿದೆ. ಉಭಯ ಶ್ರೀಗಳು ಶ್ರೇಷ್ಠ ವಿದ್ವಾಂಸರು ವಿದ್ಯಾಪ್ರೇಮಿಗಳು. ಉಭಯಶ್ರೀಗಳೂ ನಮ್ಮ ಶ್ರೀಮಠಕ್ಕೆ ದಯಮಾಡಿಸಿರುವುದು ಅತ್ಯಂತ ಸಂತೋಷಪ್ರದವಾಗಿದೆ. ಸಂಸ್ಕೃತ ಭಾಷೆಯ ಬಗ್ಗೆ ಎಲ್ಲರೂ ವಿವರವಾಗಿ ತಿಳಿಸಿದ್ದಾರೆ. ಅದಕ್ಕಿಂತಲೂ ಮುಖ್ಯವಾಗಿ ಒಂದು ಸಂಗತಿಯನ್ನು ನಾವು ಇಂದು ಮನಗಾಣಬೇಕಾಗಿದೆ. ಎಲ್ಲ ಸಂಪ್ರದಾಯದ ಸ್ವಾಮಿಗಳೂ ದೇಶದ ಹಿತದೃಷ್ಟಿಯಿಂದ ಒಟ್ಟಿಗೆ ಸೇರಿ ಕಾರ್ಯೋನ್ಮುಖರಾದರೆ ರಾಷ್ಟ್ರಕ್ಕೆ ಒಂದು ದೊಡ್ಡ ಕೊಡುಗೆಯನ್ನು ಕೊಡಬಹುದಾಗಿದೆ. ನೀವೆಲ್ಲರೂ ಉಭಯ ಶ್ರೀಗಳರ ಮಾತನ್ನು ಕೇಳಿದ್ದೀರಿ. ಒಳ್ಳೆಯ ಪರಿಣಾಮಕಾರಿಯಾದ ಸಂದೇಶವನ್ನು ಅಪ್ಪಣೆ ಕೊಡಿಸಿದ್ದಾರೆ. ವಿದ್ಯಾರ್ಥಿಗಳು ಅದನ್ನು ಗಮನವಿಟ್ಟು ಕೇಳಿ ನಿಮ್ಮ ಬದುಕನ್ನು ರೂಪಿಸಿಕೊಳ್ಳಬೇಕು'' ಎಂದು ತಿಳಿಸಿದರು.

**ಮುಂ**ಜಾನೆ ಕಾರ್ಯಕ್ರಮ ಶ್ರೀಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಧ್ವಜಾರೋಹಣದೊಂದಿಗೆ ಪ್ರಾರಂಭವಾಯಿತು. ವಿದ್ಯಾರ್ಥಿಗಳಿಂದ ಪಥಚಲನ ಕಾರ್ಯಕ್ರಮ ನಡೆಯಿತು. ಈ ಸಂದರ್ಭದಲ್ಲಿ ಏರ್ಪಡಿಸಿದ್ದ ವಸ್ತುಪ್ರದರ್ಶನವನ್ನು ಶ್ರೀಮಠದ ಆಡಳಿತಾಧಿಕಾರಿ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರು ಉದ್ಘಾಟಿಸಿದರು.

**ನಂ**ತರ ನಡೆದ ಶಾಸ್ತ್ರಾರ್ಥ ಸಭಾ ಗೋಷ್ಠಿಯು ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಅಧ್ಯಕ್ಷತೆಯನ್ನು ವಿದ್ವಾನ್ ಶ್ರೀ ಎಂ.ಎನ್. ಲಕ್ಷ್ಮೀನರಸಿಂಹಭಟ್ಟರು ವಹಿಸಿದ್ದರು. ಪರಿವೀಕ್ಷಕರಾದ ವಿದ್ವಾನ್ ಶ್ರೀ ಕೆ.ಎಸ್. ಪರಮೇಶ್ ಅವರು ಗೋಷ್ಠಿಯನ್ನು ಉದ್ಘಾಟಿಸಿದರು. ಅಲಂಕಾರ ಶಾಸ್ತ್ರವನ್ನು ಕುರಿತು ವಿದ್ವಾನ್ ಜಿ. ಗುರುಪ್ರಸಾದ್, ವ್ಯಾಕರಣ ಶಾಸ್ತ್ರವನ್ನು ಕುರಿತು ಡಾ. ಎಸ್. ಪ್ರಭುಲಿಂಗದೇವರು, ನ್ಯಾಯಶಾಸ್ತ್ರವನ್ನು ಕುರಿತು ವಿದ್ವಾನ್ ಶ್ರೀ ಪರಮಾನಾಚಾರ್, ವೇದಾಂತ ಶಾಸ್ತ್ರವನ್ನು ಕುರಿತು ವಿದ್ವಾನ್ ಶ್ರೀ ಎಸ್.ಎನ್. ಸಂಪತ್‌ಕುಮಾರ್ ಅವರು ಉಪನ್ಯಾಸ ನೀಡಿದರು. ಶ್ರೀ ಕೆ. ಗಂಗಣ್ಣ ಅವರು ಬಹುಮಾನ ವಿತರಣೆ ಮಾಡಿದರು.

★



ಡಿಸೆಂಬರ್ ೨೬ ಮತ್ತು ೨೭ರಂದು ಶ್ರೀಮಠದಲ್ಲಿ ನಡೆದ ಪೂಜ್ಯ ಶ್ರೀ ಶ್ರೀಗಳವರ ವಜ್ರಮಹೋತ್ಸವದ ಕ್ರೀಡಾಕೂಟದಲ್ಲಿ ಹುಲಿಕಲ್ಲು ಶ್ರೀ ಬಸವೇಶ್ವರ ಪ್ರೌಢಶಾಲೆಯ ತಂಡ ತ್ರೋಬಾಲ್ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿತು. ವಿಜೇತ ವಿದ್ಯಾರ್ಥಿಗಳೊಂದಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಮತ್ತು ಶ್ರೀಮಠದ ಆಡಳಿತವರ್ಗ ಹಾಗೂ ಶಿಕ್ಷಕವೃಂದ.

# ಶ್ರೀ ಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ೫೫ನೆಯ ಗಣರಾಜ್ಯೋತ್ಸವ

ತುಮಕೂರು ಜಿಲ್ಲಾಧಿಕಾರಿಗಳಾದ ಶ್ರೀ ಮಲ್ಲಿಕಾರ್ಜುನ ದ್ಯಾಬೇರಿಯವರು ಧ್ವಜಾರೋಹಣ ಮಾಡಿ ವಂದನೆ ಸ್ವೀಕರಿಸುತ್ತಿರುವುದು.

ದಿನಾಂಕ ೨೬-೧-೨೦೦೪ ರಂದು ಶ್ರೀಮಠದಲ್ಲಿ ನಡೆದ ೫೫ನೆಯ ಗಣರಾಜ್ಯೋತ್ಸವ ಸಮಾರಂಭದಲ್ಲಿ ಭಾಗವಹಿಸಿ, ಧ್ವಜಾರೋಹಣ ಮಾಡಿ ವಂದನೆ ಸ್ವೀಕರಿಸಿದ ತುಮಕೂರು ಜಿಲ್ಲಾಧಿಕಾರಿಗಳಾದ ಸನ್ಮಾನ್ಯ ಶ್ರೀ ಮಲ್ಲಿಕಾರ್ಜುನ ದ್ಯಾಬೇರಿಯವರು ಮಕ್ಕಳನ್ನು ಕುರಿತು 'ಇಂದು ಜೀವನದಲ್ಲಿ ಶಿಸ್ತನ್ನು ಅಳವಡಿಸಿಕೊಳ್ಳಬೇಕು, ರಾಷ್ಟ್ರಪ್ರಜ್ಞೆ, ರಾಷ್ಟ್ರಭಕ್ತಿಯನ್ನು ಬೆಳಸಿಕೊಳ್ಳಬೇಕು, ಆಧುನಿಕ ಸವಾಲುಗಳನ್ನು ಸ್ವೀಕರಿಸುವ ಆತ್ಮಸ್ಥೈರ್ಯ ಬೆಳಸಿಕೊಳ್ಳಬೇಕು' ಎಂದು ಕರೆ ನೀಡಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಪಂಚಾಯತ್ ಮುಖ್ಯ ನಿರ್ವಹಣಾಧಿಕಾರಿಗಳಾದ ಶ್ರೀ ಅಮರನಾರಾಯಣ ಅವರು ಮಾತನಾಡುತ್ತಾ 'ಭಾರತ ಇಂದು ವಿಜ್ಞಾನ, ಕೈಗಾರಿಕೆ, ಕೃಷಿ – ಹೀಗೆ ಅನೇಕ ರಂಗಗಳಲ್ಲಿ ಮಹತ್ತರವಾದ ಸಾಧನೆ ಮಾಡಿದೆ, ಸಾಕ್ಷರತೆಯ ಪ್ರಮಾಣ ಹೆಚ್ಚಿಸಲಾಗಿದೆ, ಮುಂದುವರಿದ ರಾಷ್ಟ್ರಗಳು ಇಂದು ಅನೇಕ ರಂಗದಲ್ಲಿ ನಮ್ಮ ಜೊತೆ ಕೈಜೋಡಿಸಲು ಮುಂದಾಗುತ್ತಿವೆ, ಯುವಕರಾದ ನೀವು ನಿಮ್ಮ ಜವಾಬ್ದಾರಿ ಅರಿತುಕೊಳ್ಳಬೇಕು, ಇದು ಕಂಪ್ಯೂಟರ್ ಯುಗ, ಈ ಜಾಗತೀಕರಣದಲ್ಲಿ ನಿಮ್ಮ ಪಾತ್ರ ಹೆಚ್ಚಬೇಕಾದರೆ ಕಷ್ಟಪಟ್ಟು ಅಧ್ಯಯನ ಮಾಡಬೇಕು. ಪೂಜ್ಯ ಸ್ವಾಮೀಜಿಯವರು ಇಷ್ಟೊಂದು ಸಾವಿರಾರು ಮಕ್ಕಳಿಗೆ ಎಲ್ಲಾ ಅನುಕೂಲ ಒದಗಿಸಿದ್ದಾರೆ, ಅದನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂದು' ಕರೆ ನೀಡಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಶ್ರೀಮಠದ ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ತಮ್ಮ ಆಶೀರ್ವಚನದಲ್ಲಿ "ಅನೇಕ ಮಹನೀಯರ ತ್ಯಾಗ





ಸನಿವಾಸ ಶಾಲೆಗಳ ಎನ್.ಸಿ.ಸಿ. ತಂಡದವರಿಂದ ಪಥ ಸಂಚಲನ

ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲಾ ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಕಾರ್ಯಕ್ರಮ

ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆ ಇವರಿಂದ ಸಾಂಸ್ಕೃತಿಕ ಕಾರ್ಯಕ್ರಮ

ಬಲಿದಾನದಿಂದ ನಾವು ಸ್ವತಂತ್ರಗಳಿಸಿದೆವು, ಆದರೆ ನಮಗೆ ನಮ್ಮದೇ ಆದ ಒಂದು ಸಂವಿಧಾನದ ಅವಶ್ಯಕತೆ ಇತ್ತು ಮತ್ತು ಬ್ರಿಟೀಷ್‌ರಿಂದ ನೇರವಾಗಿ ಆಳಲ್ಪಟ್ಟ ಹನ್ನೊಂದು ಪ್ರಾಂತ್ಯಗಳು ಐದುನೂರ ಐವತ್ತೆರಡು ರಾಜ ಸಂಸ್ಥಾನಗಳೂ ಇದ್ದವು, ಇವೆಲ್ಲವನ್ನು ಒಂದೇ ಧ್ವಜದಡಿ ತರುವ ಜವಾಬ್ದಾರಿ ಸರ್ಕಾರದ ಮೇಲಿತ್ತು. ಅಂದಿನ ಗೃಹಮಂತ್ರಿಗಳಾದ ಸರ್ದಾರ್ ವಲ್ಲಭಾಯ್ ಪಟೇಲ್‌ರ ದೃಢ ನಿರ್ಧಾರದಿಂದ ಇದು ಸಾಧ್ಯವಾಯಿತು, ಜೊತೆಗೆ ಅತ್ಯುಚ್ಚಜ್ಞಾನಧಾರೆಯ ಸಂಗಮವಾದ ಸಂವಿಧಾನವನ್ನು ರಚಿಸಿ ಆಡಳಿತಾತ್ಮಕವಾಗಿ ಜಾರಿಗೆ ತಂದ ಶುಭದಿನ. ವಿದ್ಯಾರ್ಥಿಗಳಾದ ನೀವು ರಾಷ್ಟ್ರಗೌರವವನ್ನು ಉಳಿಸುವ ದಿಶೆಯಲ್ಲಿ ಪ್ರಯತ್ನಿಸಬೇಕು, ಮಾನವೀಯತೆಯ ಮೌಲ್ಯಗಳನ್ನು ಬೆಳಸಿಕೊಳ್ಳಬೇಕು, "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ" ಎಂಬ ರಾಮಾಯಣದ ಉಕ್ತಿಯಂತೆ, ತಾಯಿ ಮತ್ತು ಜನ್ಮಕೊಟ್ಟ ಭೂಮಿ ಸ್ವರ್ಗಕ್ಕಿಂತಲೂ ಮಿಗಿಲಾದವು ಎಂಬ ತತ್ವ ನಮ್ಮದಾಗಬೇಕು" ಎಂದು ಆಶೀರ್ವಚನ ಸಂದೇಶ ನೀಡಿದರು.

ವಿದ್ಯಾರ್ಥಿಗಳಿಂದ ಆಕರ್ಷಕ ಪಥ ಸಂಚಲನ ನಡೆಯಿತು, ಇದರಲ್ಲಿ ಎನ್.ಸಿ.ಸಿ., ಸ್ಕೌಟ್ಸ್, ಸನಿವಾಸ ಪ್ರೌಢಶಾಲೆಗಳು ಡಿ.ಇ.ಡಿ., ಅಂಧರ ಮಕ್ಕಳ ಶಾಲೆ, ಸಮನ್ವಯ ಶಿಕ್ಷಣ ಶಾಲೆಯ ವಿದ್ಯಾರ್ಥಿಗಳು ಭಾಗವಹಿಸಿದ್ದರು. ವಿದ್ಯಾರ್ಥಿಗಳಿಂದ ಸಾಮೂಹಿಕ ಕವಾಯತು, ರಾಷ್ಟ್ರದ ಏಕತೆ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

**ಕು.** ಕುಸುಮ ಹಾಗೂ ಸಂಗಡಿಗರಿಂದ ಪ್ರಾರ್ಥನೆ. ಶ್ರೀ ಜಿ.ಹೆಚ್. ಗಂಗಾಧರಯ್ಯನವರಿಂದ ಸ್ವಾಗತಿಸಿದರು. ಶ್ರೀ ಡಿ. ಶಿವಕುಮಾರ್‌ರವರಿಂದ ಶರಣು ಸಮರ್ಪಣೆ ಮಾಡಿದರು. ಶ್ರೀ ಡಿ.ಎಸ್. ನಾಗರಾಜು ಅವರು ಕಾರ್ಯಕ್ರಮ ನಿರೂಪಿಸಿದರು.

ವರದಿ : ಡಿ.ಎಸ್. ನಾಗರಾಜು

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೧೯೮. | ಶ್ರೀ ಟಿ.ಎಂ. ನಾಗೇಶ್ ಚಕ್ರೇಶ್ವರ<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೧೯೯. | ಶ್ರೀ ಟಿ.ಬಿ. ಶಂಕರಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೨೦೦. | ಶ್ರೀ ಡಿ. ಶಂಕರಯ್ಯ<br>ದೈಹಿಕ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೧೯೮ ರಿಂದ ೧೨೦೦ರ ವರೆಗಿನ ವಿಳಾಸ<br>ಶ್ರೀ ಗಂಗಾಧರೇಶ್ವರ ಗ್ರಾಮಾಂತರ ಪ್ರೌಢಶಾಲೆ,<br>ಆನೆಕೆರೆ, ತುರುವೇಕೆರೆ ತಾಲ್ಲೂಕು. | |
| ೧೨೦೧. | ಶ್ರೀ ಹನುಮಂತರಾಜು<br>ಸೇವಕರು,<br>ನಿವೇದಿತಾ ಪ್ರೌಢಶಾಲೆ,<br>ಕ್ಯಾತಸಂದ್ರ, ತುಮಕೂರು ತಾಲ್ಲೂಕು. | ೨,೦೦೧.೦೦ |
| ೧೨೦೨. | ಶ್ರೀ ಎಸ್.ಎಂ. ಬಸವಲಿಂಗಮರಿ<br>ಸಹ ಶಿಕ್ಷಕರು | ೨,೦೦೦.೦೦ |
| ೧೨೦೩. | ಶ್ರೀ ಎನ್.ಸಿ. ನಂಜಪ್ಪ<br>ಸಹ ಶಿಕ್ಷಕರು | ೨,೦೦೦.೦೦ |
| ೧೨೦೪. | ಶ್ರೀ ಶಿವಪ್ಪ<br>ಸಹ ಶಿಕ್ಷಕರು | ೨,೦೦೦.೦೦ |
| ೧೨೦೫. | ಶ್ರೀ ಎಸ್. ಕಲ್ಲಪ್ಪ<br>ಹಿಂದಿ ಶಿಕ್ಷಕರು | ೨,೦೦೦.೦೦ |
| ೧೨೦೬. | ಶ್ರೀ ಬೋರಯ್ಯ<br>ದೈಹಿಕ ಶಿಕ್ಷಕರು | ೨,೦೦೦.೦೦ |
| ೧೨೦೭. | ಶ್ರೀ ಟಿ.ಡಿ. ವಿಷಕಂಠಪ್ಪ<br>ಸಹ ಶಿಕ್ಷಕರು | ೨,೦೦೦.೦೦ |
| ೧೨೦೮. | ಶ್ರೀಮತಿ ಜಿ.ಎಸ್. ಸರೋಜಮ್ಮ<br>ಸಹ ಶಿಕ್ಷಕರು | ೨,೦೦೦.೦೦ |
| | ಕ್ರ.ಸಂ. ೧೨೦೨ ರಿಂದ ೧೨೦೮ರ ವರೆಗಿನ ವಿಳಾಸ<br>ಶ್ರೀ ವಿನಾಯಕ ಪದವಿಪೂರ್ವ ಕಾಲೇಜು,<br>ನಿಟ್ಟೂರು, ಗುಬ್ಬಿ ತಾಲ್ಲೂಕು. | |
| ೧೨೦೯. | ಶ್ರೀ ಜಿ.ಕೆ. ನಾಗರಾಜು<br>ಸಹ ಶಿಕ್ಷಕರು | ೧,೦೦೦.೦೦<br>(೨ನೇ ಕಂತು) |
| ೧೨೧೦. | ಶ್ರೀ ಎಸ್. ಶಿವಕುಮಾರಸ್ವಾಮಿ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೧. | ಶ್ರೀ ವಿ.ಎಸ್. ಗುರುದೇವರು<br>ವೃತ್ತಿ ಶಿಕ್ಷಕರು | ೧,೦೦೧.೦೦ |
| ೧೨೧೨. | ಶ್ರೀ ಬಿ.ಎಸ್. ಚಂದ್ರಶೇಖರಯ್ಯ<br>ಪ್ರಥಮ ದರ್ಜೆ ಸಹಾಯಕರು | ೧,೦೦೧.೦೦ |
| | ಕ್ರ.ಸಂ. ೧೨೦೯ ರಿಂದ ೧೨೧೨ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕೆ.ಬಿ. ಮಠ, ಮಾಗಡಿ ತಾಲ್ಲೂಕು. | |
| ೧೨೧೩. | ಶ್ರೀ ಸಿ. ರೇಣುಕಯ್ಯ<br>ಪ್ರಾಂಶುಪಾಲರು,<br>ಶ್ರೀ ಸಿದ್ಧಗಂಗಾ ಗ್ರಾ. ಪದವಿಪೂರ್ವ ಕಾಲೇಜು,<br>ಜೆ.ಎಂ. ಹಳ್ಳಿ, ಮಾಗಡಿ ತಾಲ್ಲೂಕು. | ೨,೦೦೧.೦೦ |
| ೧೨೧೪. | ಶ್ರೀ ಟಿ.ಎಂ. ನಾರಾಯಣಸ್ವಾಮಿ<br>ಸಹ ಶಿಕ್ಷಕರು,<br>ನಿವೇದಿತಾ ಪ್ರೌಢಶಾಲೆ,<br>ಕ್ಯಾತಸಂದ್ರ, ತುಮಕೂರು ತಾಲ್ಲೂಕು. | ೧,೦೦೧.೦೦ |
| ೧೨೧೫. | ಶ್ರೀ ಸೋಮಶೇಖರ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೧೨೧೬. | ಶ್ರೀ ಎನ್.ವಿ. ಸತ್ಯನಾರಾಯಣ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೭. | ಶ್ರೀ ಕೆ.ಎಸ್. ಲೋಕೇಶ್<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೮. | ಶ್ರೀ ಗುರುಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೧೯. | ಶ್ರೀ ಹೆಚ್. ಗಂಗಯ್ಯ<br>ದ್ವಿತೀಯದರ್ಜೆ ಸಹಾಯಕರು | ೧,೦೦೧.೦೦ |
| ೧೨೨೦. | ಶ್ರೀ ಜಯಣ್ಣ<br>ಸೇವಕರು | ೧,೦೦೧.೦೦ |
| | ಕ್ರ.ಸಂ. ೧೨೧೫ ರಿಂದ ೧೨೨೦ರ ವರೆಗಿನ ವಿಳಾಸ<br>ಶ್ರೀ ಉದ್ದಾನೇಶ್ವರ ಗ್ರಾಮಾಂತರ ಪ್ರೌಢಶಾಲೆ<br>ಗಟ್ಟಿಪುರ, ಮಾಗಡಿ ತಾಲ್ಲೂಕು. | |
| ೧೨೨೧. | ಶ್ರೀ ಪ್ರಭು<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦ |
| ೧೨೨೨. | ಶ್ರೀಮತಿ ಶಿವರಾಜಮ್ಮ ಕೋಂ ಪರಮಶಿವಯ್ಯ<br>ಉಲ್ಲಾಳು ಪೋಸ್ಟ್,<br>ಬೆಂಗಳೂರು-೫೬. | ೧೦,೦೦೦.೦೦ |

*(ಮುಂದುವರಿಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೧೮. | ಶ್ರೀ ಜಿ. ಶಿವರುದ್ರಯ್ಯ<br>ಮುಖ್ಯ ಶಿಕ್ಷಕರು,<br>ಅಂಬಿಕಾ ಹಿರಿಯ ಪ್ರಾಥಮಿಕ ಪಾಠಶಾಲೆ,<br>ಜೈಮಾರುತಿನಗರ, ನಂದಿನ ಬಡಾವಣೆ,<br>ಬೆಂಗಳೂರು – ೯೬. | ೧,೦೦೧.೦೦ |
| ೮೧೯. | ಶ್ರೀ ಎನ್. ರುದ್ರಾರಾಧ್ಯ ಎಂ.ಎ.ಬಿ.ಇಡಿ.,<br>ನಂ. ೨೮೩೬, ೮ನೇ ಮುಖ್ಯರಸ್ತೆ,<br>ಗೋಕುಲ ಬಡಾವಣೆ,<br>ಕ್ಯಾತಸಂದ್ರ ಅಂಚೆ, ತುಮಕೂರು-೪. | ೧,೦೦೧.೦೦ |
| ೮೨೦. | ಶ್ರೀ ಹೆಚ್.ಡಿ. ತಿಪ್ಪೇಸ್ವಾಮಿ<br>ಉಪನ್ಯಾಸಕರು,<br>ಶ್ರೀ ಗಣೇಶ ಗ್ರಾಮಾಂತರ ಪ.ಪೂ. ಕಾಲೇಜು,<br>ಗೂಳೂರು, ತುಮಕೂರು ತಾಲ್ಲೂಕು. | ೧,೦೦೧.೦೦ |
| ೮೨೧. | ಶ್ರೀ ಬಿ. ಸತೀಶ್‌ಕುಮಾರ್<br>ಬಿನ್ ಬಿ.ಪಿ. ಬಸವರಾಜು<br>ಸಿದ್ಧಗಂಗಾ ಮಠ ವಸತಿ ಗೃಹಗಳು,<br>ಶ್ರೀ ಸಿದ್ಧಗಂಗಾಮಠ, ತುಮಕೂರು ತಾ. | ೨,೦೦೧.೦೦ |
| ೮೨೨. | ಶ್ರೀ ವೆಂಕಟರಸ್ವಾಮಿ<br>ವೃತ್ತಿ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೮೨೩. | ಶ್ರೀ ಎಸ್.ಎಂ. ಬಸವಲಿಂಗಮರಿ<br>ಸಹ ಶಿಕ್ಷಕರು,<br>ಶ್ರೀ ವಿ.ಸಂ.ಪ.ಪೂ. ಕಾಲೇಜು,<br>ನಿಟ್ಟೂರು, ಗುಬ್ಬಿ ತಾಲ್ಲೂಕು. | ೧,೦೦೦.೦೦ |
| ೮೨೪. | ಶ್ರೀ ಎಸ್. ಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೮೨೫. | ಶ್ರೀ ಆರ್.ಟಿ. ರಂಗಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೮೨೬. | ಶ್ರೀ ಕೆ. ರಮೇಶ<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೮೨೪ ರಿಂದ ೮೨೬ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಬೂದಿಗೆರೆ, ದೇವನಹಳ್ಳಿ ತಾಲ್ಲೂಕು. | |
| ೮೨೭. | ಅಧ್ಯಕ್ಷರು<br>ಅಖಿಲ ಭಾರತ ವೀರಶೈವ ಮಹಾಸಭಾ (ರಿ)<br>ಬಿನ್ನಪೇಟೆ ಘಟಕ,<br>ನಂ. ೪೨, ೪ನೇ ತಿರುವು, ೯ನೇ ಮುಖ್ಯರಸ್ತೆ,<br>ವಿಜಯನಗರ, ೨ನೇ ಹಂತ,<br>ಬೆಂಗಳೂರು – ೫೬೦ ೦೪೦. | ೧,೦೦೦.೦೦ |
| ೮೨೮. | ಶ್ರೀ ಬಿ.ಆರ್. ಶಿವಣ್ಣ<br>ನಿವೃತ್ತ ಪೊಲೀಸ್ ಸಬ್ ಇನ್ಸ್‌ಪೆಕ್ಟರ್,<br>ಆರ್.ಪಿ.ಸಿ. ಲೇ ಔಟ್, ವಿಜಯನಗರ,<br>ಬೆಂಗಳೂರು – ೫೬೦ ೦೪೦. | ೧,೦೦೧.೦೦ |
| ೮೨೯. | ಶ್ರೀ ಎನ್. ಚಂದ್ರಶೇಖರಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಶಿವನಹಳ್ಳಿ, ಬೆಂಗಳೂರು-೧೦. | ೧,೦೦೧.೦೦ |
| ೮೩೦. | ಶ್ರೀ ಸಿ.ಎನ್. ಸದಾಶಿವಯ್ಯ<br>ಪ್ರಾಂಶುಪಾಲರು | ೧,೦೦೧.೦೦ |
| ೮೩೧. | ಶ್ರೀಮತಿ ಉಮಾದೇವಿ<br>ಉಪನ್ಯಾಸಕರು | ೧,೦೦೧.೦೦ |
| ೮೩೨. | ಶ್ರೀ ಎ.ಪಿ. ಶಿವಕುಮಾರ<br>ಉಪನ್ಯಾಸಕರು | ೧,೦೦೧.೦೦ |
| ೮೩೩. | ಶ್ರೀಮತಿ ಟಿ.ಜಿ. ವಿನುತಾ<br>ಉಪನ್ಯಾಸಕರು | ೧,೦೦೧.೦೦ |
| ೮೩೪. | ಶ್ರೀಮತಿ ಟಿ.ಆರ್. ಉಷಾ<br>ಉಪನ್ಯಾಸಕರು | ೧,೦೦೧.೦೦ |
| ೮೩೫. | ಶ್ರೀ ಕೆ.ಆರ್. ರಂಗನಾಥಸ್ವಾಮಿ<br>ಉಪನ್ಯಾಸಕರು | ೧,೦೦೧.೦೦ |
| ೮೩೬. | ಶ್ರೀ ಡಿ.ಆರ್. ವೇಣುಗೋಪಾಲ್<br>ಉಪನ್ಯಾಸಕರು | ೧,೦೦೧.೦೦ |
| ೮೩೭. | ಶ್ರೀಮತಿ ಪಿ. ಸುಧಾರಾಣಿ<br>ಉಪನ್ಯಾಸಕರು | ೧,೦೦೧.೦೦ |
| ೮೩೮. | ಶ್ರೀ ಡಿ.ಎಂ. ಪ್ರಸನ್ನಕುಮಾರ್<br>ಉಪನ್ಯಾಸಕರು | ೧,೦೦೧.೦೦ |
| ೮೩೯. | ಶ್ರೀ ಹನುಮಂತಪ್ಪ<br>ಉಪನ್ಯಾಸಕರು | ೧,೦೦೧.೦೦ |
| | ಕ್ರ.ಸಂ. ೮೩೦ ರಿಂದ ೮೩೯ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು<br>ಬಿ.ಹೆಚ್. ರಸ್ತೆ, ತುಮಕೂರು. | |

*(ಮುಂದುವರಿಯುತ್ತದೆ)*




## ಕರ್ನಾಟಕ ಸರ್ಕಾರ

## ೫೫ನೇ ಗಣರಾಜ್ಯೋತ್ಸವ

## ಅಂದು ಭವ್ಯ ಭಾರತದ ಭವಿಷ್ಯದ ಯೋಜನೆ

## ಇಂದು ಆಧುನಿಕ ಜಗತ್ತಿನ ಅಭಿವೃದ್ಧಿಶೀಲತೆಗೆ ಮಾದರಿ ಕರ್ನಾಟಕ

**ಇಂ**ದು ನಮ್ಮ ಭಾರತ ದೇಶದ ೫೫ನೇ ಗಣರಾಜ್ಯೋತ್ಸವ ಸಂಭ್ರಮ. ವೈವಿಧ್ಯತೆಗಳ ನೆಲೆವೀಡಾದ ಭಾರತ, ರಾಷ್ಟ್ರಕವಿ ಕುವೆಂಪು ಅವರ ಆಶಯದಂತೆ ಸರ್ವಜನಾಂಗದ ಶಾಂತಿಯ ತೋಟವಾಗಲು ಸರ್ವಸಮ್ಮತ ರಾಜ್ಯಾಂಗವನ್ನು ರೂಪಿಸಿ, ಪ್ರಜಾಪ್ರಭುತ್ವ ಹಾಗೂ ಮಾರ್ಗದರ್ಶನ ಮಾಡಿದ ಮಹನೀಯರನ್ನು ಸ್ಮರಿಸುವ ಸಂದರ್ಭ. ಅದರ ಫಲವಾಗಿ ಇಂದು ಇಡೀ ದೇಶದಲ್ಲೇ ಕರ್ನಾಟಕ ವಿವಿಧ ರಂಗಗಳಲ್ಲಿ ಸಾಧಿಸಿದ ತನ್ನ ಮಹತ್ತರ ಸಾಧನೆಗಳಿಂದಾಗಿ ಮುಂಚೂಣಿಯಲ್ಲಿದೆ.

**ಕ**ಳೆದ ೪ ವರ್ಷಗಳಲ್ಲಿ ಸರ್ಕಾರದ ಯೋಜನಾಬದ್ಧ ಕಾರ್ಯಚಟುವಟಿಕೆ ಮತ್ತು ಪಾರದರ್ಶಕ ಆಡಳಿತ ವಿಧಾನಗಳಿಂದಾಗಿ ಎಲ್ಲರ ನೋಟ ಈಗ ಕರ್ನಾಟಕದತ್ತ ನೆಟ್ಟಿದೆ. ಈ ಅಪೂರ್ವ ಸಾಧನೆ ಇಡೀ ದೇಶವೇ ಹೆಮ್ಮೆಪಡುವಂತಾಗಿದೆ.

**೫೦** ಲಕ್ಷಕ್ಕೂ ಹೆಚ್ಚು ಶಾಲಾ ಮಕ್ಕಳಿಗೆ ಮಧ್ಯಾಹ್ನ ಬಿಸಿಯೂಟದ ಮಾದರಿ ಕಾರ್ಯಕ್ರಮ **ಅಕ್ಷರ ದಾಸೋಹ** ★ ೧೨ ಲಕ್ಷಕ್ಕೂ ಹೆಚ್ಚು ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆ, ಸ್ವಾತಂತ್ರ್ಯಕ್ಕಾಗಿ ಕಾರಣವಾದ **ಸ್ತ್ರೀ ಶಕ್ತಿ** ★ ರೈತರ ಹಿತರಕ್ಷಣೆಯ **ಬೆಳೆ ವಿಮೆ,** ★ ೩.೩೨೨ ಕೆರೆಗಳ ಜೀರ್ಣೋದ್ಧಾರ, ★ ವಸತಿ ರಹಿತರಿಗಾಗಿ ೮ ಲಕ್ಷಮನೆಗಳ ನಿರ್ಮಾಣ ★ ಮಾಸಿಕ ಕೇವಲ ೫ ರೂ. ವಂತಿಗೆಯಲ್ಲಿ ಅತ್ಯಾಧುನಿಕ ವೈದ್ಯಕೀಯ ಸೌಲಭ್ಯದ **ಯಶಸ್ವಿನಿ** ಹಾಗೂ ಕಡಿಮೆ ವೆಚ್ಚದಲ್ಲಿ ದೂರಸಂವೇದಿ ಸಂಪರ್ಕ ಜಾಲದ ಚಿಕಿತ್ಸಾ ಸೌಲಭ್ಯ. ★ ಕೊಳಚೆ ಪ್ರದೇಶಗಳ ನಿವಾಸಿಗಳ ಜೀವನಮಟ್ಟದ ಉನ್ನತಿಯ **ನಿರ್ಮಲ ಜ್ಯೋತಿ** ಇವು ಕರ್ನಾಟಕದಲ್ಲಿ ಜನರ ಜೀವನ ಮಟ್ಟದ ಮೇಲ್ಮಟ್ಟಕ್ಕೇರಲು ಕಾರಣವಾದ ಅಪೂರ್ವ ಯೋಜನೆಗಳು.

**ಮಾ**ಹಿತಿ ತಂತ್ರಜ್ಞಾನ, ಕೃಷಿ, ಆಹಾರ ಘಟಕ ಹಾಗೂ ಇತರ ಉದ್ದಿಮೆಗಳ ಸಾಧನೆ ಮತ್ತು ಸೌಲಭ್ಯಗಳಿಂದಾಗಿ ವಿಶ್ವವೇ ಇಂದು ಕರ್ನಾಟಕದತ್ತ ನೋಡುತ್ತಿದೆ.


ಕರ್ನಾಟಕ ವಾರ್ತೆ

RNI No. 17139/69 "Siddaganga" Monthly - postal Reg.No. KA/SK/TMR/385/2003-05




ಜನವರಿ ೧೫ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಪೂಜ್ಯ ಶ್ರೀ ಶ್ರೀ ಅಟವೀ ಸ್ವಾಮಿಗಳವರ ಮತ್ತು ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ಪುಣ್ಯಾರಾಧನಾ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ 'ಸಿದ್ಧಗಂಗಾ' ಸಂಕ್ರಮಣ ಸಂಚಿಕೆಯನ್ನು ಬಿಡುಗಡೆ ಮಾಡಿದ ಶ್ರೀಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು.



ಗುಲಬರ್ಗಾ ಜಿಲ್ಲೆ ಸುಕ್ಷೇತ್ರ, ನಾಲವಾರ ಸದ್ಗುರು ಶ್ರೀ ಕೋರಿಸಿದ್ಧೇಶ್ವರ ಸ್ವಾಮಿ ಜಾತ್ರಾಮಹೋತ್ಸವ ಸಮಾರೋಪ ಸಮಾರಂಭದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಪೂಜ್ಯಶ್ರೀ ತೋಟೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರಿಂದ ಗೌರವ ಸಮರ್ಪಣೆ. ಈ ಸಂದರ್ಭದಲ್ಲಿ ಅ.ಭಾ.ವೀ. ಮಹಾಸಭಾಧ್ಯಕ್ಷ ಶ್ರೀ ಭೀಮಣ್ಣ ಖಂಡ್ರೆ, ಉದ್ಯಮಿ ಶ್ರೀ ಬಿ.ಜಿ. ಪಾಟೀಲ್, ಶ್ರೀ ಬಾಗನಗೌಡ ಸಂಕನೂರು ಮೊದಲಾದ ಗಣ್ಯರು ಉಪಸ್ಥಿತರಿದ್ದರು.